ಸೇವಾಸದನ ಗ್ರಂಥಮಾಲಾ

# ಗೀತಾಮೃತ ಮಹೋದಧಿ





ಪ್ರಕಾಶಕರು

ಸೇವಾಸದನ ಪ್ರೆಸ್,

ಚಿದಂಬರಾಶ್ರಮ, ಗುಬ್ಬಿ

ಬೆಲೆ ರೂ ೧-೦೦

ಸೇವಾಸದನ ಗ್ರಂಥಮಾಲಾ.

# ಗೀತಾಮೃತ ಮಹೋದಧಿ

ಶ್ರೀ ಚಿದಂಬರ.

೧೯೬೩.

ಪ್ರಕಾಶಕರು.

ಸೇವಾಸದನ-ಚಿದಂಬರಾಶ್ರಮ-ಗುಬ್ಬಿ.

# ಗೀತಾಮೃತ ಮಹೋದಧಿ



ಶ್ರೀಮದ್ಭಗವದ್ಗೀತೆಯು ಒಂದು ಅಪೂರ್ವ ಗ್ರಂಥ ಆದುದರಿಂದಲೇ ಇದಕ್ಕೆ ದೇಶ ದೇಶಗಳಲ್ಲಿಯೂ ಅಭೂತಪೂರ್ವವಾದ ಮಾನ್ಯತೆಯು ದೊರತಿದೆ ಪ್ರಾಚೀನ ಸಂಪ್ರದಾಯಾಭಿಮಾನಿ ಗಳಾದವರು ಇದನ್ನು ಶ್ರದ್ಧೆಯಿಂದ ಪಾರಾಯಣಮಾಡುತ್ತಾರೆ ಸಂಸ್ಕೃತಜ್ಞರಾದವರು ಗೀತೆಯ ವಿಚಾರ ವಿಮರ್ಶೆಮಾಡುತ್ತಾರ ಶಾಸ್ತ್ರಜ್ಞರಾದವರು ಗೀತೆಯ ಮೇಲೆ ಟೀಕೆಟಿಪ್ಪಣಿಗಳನ್ನು ಬರದು ವಿವಿಧ ವಿಮರ್ಶಾರೂಪ ಉಪನ್ಯಾಸಗಳನ್ನು ಬರಯುವುದರಲ್ಲಿ ಆನಂದಿಸುತ್ತಾರೆ ಆದುದರಿಂದಲೇ ಇದರ ಮೇಲೆ ಲೆಕ್ಕವಿಲ್ಲದಷ್ಟು ಗ್ರಂಥಗಳು ಆಗಿಹೋಗಿರುವುವು ಇನ್ನೂ ಆಗುತ್ತಿರುವುವು ಭಾರತವರ್ಷದ ಭಾಷೆಗಳಲ್ಲಲ್ಲದೆ ಅನ್ಯದೇಶಭಾಷೆಗಳ ವಿದ್ವಾಂಸರು ಸ್ವಯಂಸ್ಫೂರ್ತಿಯ ಮೇಲೆ ಈ ಗೀತೆಯ ವೈಶಿಷ್ಟ್ಯವನ್ನು ಅನುಭವಮಾಡಿ ಅರವತ್ತರ ಮೇಲೆ ಗ್ರಂಥಗಳನ್ನು ಬರದಿದ್ದಾರೆ ಈ ಎಲ್ಲಾ ಗ್ರಂಥಕಾರರು ತಮ್ಮ ತಮ್ಮ ಮತಗಳನ್ನು ಪ್ರಚಾರ ಮಾಡುವುದಕ್ಕಾಗಿಯೇ ಗೀತೆಯನ್ನು ಆಧಾರವಾಗಿಟ್ಟುಕೊಂಡಿದ್ದಾರೆ ಹೀಗೆ ವಿವಿಧರೀತಿಯಲ್ಲಿ ಪಂಡಿತ ಜ್ಞಾನಿ ಮಹಾತ್ಮರುಗಳಿಂದ ಯಾರು ಹೇಗೆ ಭಾವಿಸಿದರೂ ಹಾಗೆಯೇ ಅವರಿಗೆ ತೃಪ್ತಿಯನ್ನು ಕೊಡುತ್ತಿರುವ ಈ ಅಮೋಘ ಗ್ರಂಥರೂಪೀ ಮಹಾ ಸಮುದ್ರ

ದಲ್ಲಿ ಮಿಂದು ಜ್ಞಾನಾಮೃತವನ್ನು ಆಸ್ವಾದಿಸುವ ಸಾಧಕ ಭಕ್ತ ವೃಂದಕ್ಕೆ ಸಮರ್ಪಿಸಲ್ಪಡುತ್ತಿರುವ ಉಪಹಾರ ಇದು ಪ್ರಾಚೀನ ಮತ್ತು ಆಧುನಿಕ ಟೀಕಾಭಾಷ್ಯಕಾರರುಗಳು ಗುರ್ತಿಸುವ ವಿಶೇಷ ವಿಷಯಗಳನ್ನು ಸಂಗ್ರಹಿಸಿ ವಾಚಕರೆದುರಿಗಿಡುತ್ತಿರುವೆವು

ಎಲ್ಲರಿಗೂ ಮೊದಲು ಇದಕ್ಕೆ ಗೀತಾಶಾಸ್ತ್ರವೆಂದು ನಾಮಕರಣಮಾಡಿದವರು ಶ್ರೀ ಶಂಕರಾಚಾರ್ಯರು.

ಶ್ರೀ ಕೃಷ್ಣಪರಮಾತ್ಮನು ಧರ್ಮಸಂಸ್ಥಾಪನೆಗಾಗಿ ಅವತಾರ ಮಾಡಿದನು ಆ ಧರ್ಮವನ್ನು ಅರ್ಜುನನಿಗೆ ಉಪದೇಶಮಾಡಿದನು. ಅದನ್ನೆ ಆಚರಣೆಮಾಡಿ ತೋರಿಸಿದನು ಅದೇ ಧರ್ಮವೇ ಗೀತಾಶಾಸ್ತ್ರದಲ್ಲಿ ವಿವರಿಸಲ್ಪಟ್ಟಿದೆ ಭಗವಾನ್ ಶ್ರೀ ಕೃಷ್ಣನು ಯಾವ ಮಾನವೀ ಧರ್ಮವನ್ನು ಉಪದೇಶಮಾಡಿದನೋ ಅಥವಾ ಗಾಯನಮಾಡಿದನೋ ಅದೇ ಶ್ರೀಮದ್ಭಗವದ್ಗೀತೆಯು

---

# ಅಧ್ಯಾಯ ಸೂಚಿ

ಈ ಗೀತಾಶಾಸ್ತ್ರದ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿಯೂ ಒಂದು ಸಂಕಲ್ಪವಿದೆ ಅದೇನೆಂದರೆ—

ಇತಿ ಶ್ರೀಮದ್ಭಗವದ್ಗೀತಾಸು–ಉಪನಿಷತ್ಸು–ಬ್ರಹ್ಮವಿದ್ಯಾಯಾಂ–ಯೋಗಶಾಸ್ತ್ರೇ–ಶ್ರೀ ಕೃಷ್ಣಾರ್ಜುನ ಸಂವಾದೇ (ಅರ್ಜುನವಿಷಾದಯೋಗೋನಾಮ) ಪ್ರಥಮೋಧ್ಯಾಯಃ

ಇದರಲ್ಲಿ ಶ್ರೀಮದ್ಭಗವದ್ಗೀತಾ, ಉಪನಿಷತ್ತು, ಬ್ರಹ್ಮವಿದ್ಯಾಯೋಗಶಾಸ್ತ್ರ, ಶ್ರೀ ಕೃಷ್ಣಾರ್ಜುನಸಂವಾದ ಈ ಐದು ವಿಷಯಗಳಲ್ಲಿ ಎಲ್ಲವೂ ಅಥವಾ ಒಂದೊಂದೂ ಈ ಗ್ರಂಥದ ಹೆಸರೆಂದು ತಿಳಿಯಬಹುದು

ಮಹಾತ್ಮಾ ಗಾಂಧಿಯವರು ಗುಜರಾತಿಯಲ್ಲಿ ಇದರ ಭಾಷ್ಯವನ್ನು ಬರೆದು ಇದಕ್ಕೆ ಅನಾಸಕ್ತಿಯೋಗವೆಂದು ಹೆಸರಿಟ್ಟರು ಅವರ ಹೇಳಿಕೆ ಇದು—

"ಗೀತೆಯ ಆಶಯವು ಆತ್ಮಾರ್ಥಿಗಳಿಗೆ ಆತ್ಮದರ್ಶನದ ಅದ್ವಿತೀಯ ಉಪಾಯವನ್ನು ಬೋಧಿಸುವುದು ಯಾವುದು ಹಿಂದೂಧರ್ಮದಲ್ಲಿ ಬೇರೆ ಬೇರೆಯಾಗಿ, ಬಿಡಿಬಿಡಿಯಾಗಿ ಅಲ್ಲಲ್ಲಿ ಕಾಣಬರುವುದೋ ಅದನ್ನೆಲ್ಲಾ ಚೆನ್ನಾಗಿ ಒಟ್ಟುಗೂಡಿಸಿ ಗೀತೆಯು ಸಿದ್ಧಪಡಿಸಿರುವುದು ಕರ್ಮಫಲತ್ಯಾಗವೇ ಇದರಲ್ಲಿರುವ ಉಪಾಯವು

ದೇಹವೆಲ್ಲಿರುವುದೋ ಅಲ್ಲಿ ಕರ್ಮವಿದ್ದೇ ಇದೆ. ಕರ್ಮದೊಡನೆ ಯಾವುದಾದರೊಂದು ದೋಷವು ಅಂಟಿಕೊಂಡೇ ಇರುವುದು. ಮುಕ್ತಿಯು ನಿರ್ದೋಷಿಯಾದವನಿಗೆ ಮಾತ್ರ ಲಭ್ಯವಾಗುವುದು. ಹಾಗಾದರೆ ಕರ್ಮಬಂಧನದಿಂದ-ಅದರ ದೋಷದಿಂದ ಬಿಡುಗಡೆ ಯಾಗುವುದು ಹೇಗೆ? ಇದಕ್ಕೆ ಉತ್ತರವು ಗೀತೆಯಲ್ಲಿ ಸ್ಪಷ್ಟವಾಗಿರುವುದು.

"ಯಜ್ಞಾರ್ಥಕರ್ಮದಿಂದ—ನಿಷ್ಕಾಮಕರ್ಮದಿಂದ —ಕರ್ಮಫಲ ತ್ಯಾಗದಿಂದ. "

ಲೋಕಮಾನ್ಯ ತಿಲಕರು ಇದಕ್ಕೆ ಕರ್ಮಯೋಗಶಾಸ್ತ್ರವೆಂದು ಹೆಸರಿಟ್ಟಿದ್ದಾರೆ.

ಶ್ರೀಮಚ್ಛಂಕರಾಚಾರ್ಯರು ಗೀತಾಭಾಷ್ಯದ ಭೂಮಿಕೆ ಯಲ್ಲಿ ಈ ರೀತಿ ಬರೆಯುತ್ತಾರೆ—

" ದೀರ್ಘೇಣ ಕಾಲೇನ....ಪ್ರವರ್ಧಮಾನೇ ಅಧರ್ಮೇ ಜಗತಃ ಸ್ಥಿತಿಂ ಪರಿಪಿಪಾಲಯಿಷುಃ ಸ ಆದಿಕರ್ತಾ....ವಿಷ್ಣುಃ....ಕೃಷ್ಣಃಕಿಲ ಸಂಬಭೂವ........ಸ....ಲೋಕಾನುಗ್ರಹಂ ಕುರ್ವನ್—ವೈದಿಕಂ ಧರ್ಮದ್ವಯಮರ್ಜುನಾಯ....ಉಪದಿದೇಶ....ತಂ ಧರ್ಮಂ ಭಗವತಾ ಯಥೋಪದಿಷ್ಟಂ ವೇದವ್ಯಾಸಃ ಗೀತಾಖ್ಯೈಃ ಸಪ್ತಭಿಃ ಶ್ಲೋಕ ಶತೈ ರುಪನಿಬಬಂಧ....ತದಿದಂ ಗೀತಾಶಾಸ್ತ್ರಂ ಸಮುಸ್ತ ವೇದಾರ್ಥಸಾರ ಸಂಗ್ರಹಭೂತಂ "

ಬಹುಕಾಲವಾದ ಮೇಲೆ–ಅಧರ್ಮವು ವೃದ್ಧಿಹೊಂದಿದ ನಂತರ ಜಗತ್ತನ್ನು ಸರಿಯಾಗಿ ನಿಲ್ಲಿಸಬೇಕೆಂಬ ಇಚ್ಛೆಯುಳ್ಳ ಆದಿಕರ್ತ

ನಾದ—ವಿಷ್ಣುವು—ಕೃಷ್ಣರೂಪದಿಂದ ಹುಟ್ಟಿದನು—ಆತನು—ಜನಗಳ ಮೇಲೆ ಕೃಪೆಯನ್ನಿಟ್ಟು ವೇದದ ಎರಡು ಧರ್ಮಗಳ (ಪ್ರವೃತ್ತಿ ನಿವೃತ್ತಿರೂಪ) ಉಪದೇಶವನ್ನು—ಅರ್ಜುನನಿಗೆ ಮಾಡಿದನು. ಭಗವಂತನು ಹೇಗೆ ಉಪದೇಶಮಾಡಿದನೋ ಹಾಗೆಯೇ ಆ ಧರ್ಮವನ್ನು ವೇದವ್ಯಾಸರು—ಗೀತಾ ಎಂಬ ಏಳುನೂರು ಶ್ಲೋಕಗಳ ರೂಪದಲ್ಲಿ ಗ್ರಂಥವಾಗಿ ಬರೆದರು.—ಈ ಗೀತಾ ಶಾಸ್ತ್ರವು ಸಮಸ್ತ ವೇದಸಾರವಾಗಿದೆ. ಈ ಗೀತಾಶಾಸ್ತ್ರದಲ್ಲಿರುವ ಹದಿನೆಂಟು ಅಧ್ಯಾಯಗಳಿಗೆ ವಿವಿಧ ಟೀಕಾಕಾರರು ಬೇರೆ ಬೇರೆ ಹೆಸರುಗಳನ್ನಿಟ್ಟಿದ್ದಾರೆ. ಈ ವಿವಿಧ ನಾಮಕರಣಗಳಿಂದ ಸಂಶಯವು ಹುಟ್ಟಬಾರದೆಂದು ಈ ವಿಷಯವನ್ನಿಲ್ಲಿ ಅನುವಾದ ಮಾಡುತ್ತೇವೆ.

ಮೊದಲನೆಯ ಅಧ್ಯಾಯ :— ಈ ವಿಷಯದಲ್ಲಿ ಎಲ್ಲರದ್ದೂ ಒಂದೇ ಮತ. " ವಿಷಾದಯೋಗ '

ಎರಡನೆಯ ಅಧ್ಯಾಯ ;—ಇದರ ಹೆಸರು ' ಸಾಂಖ್ಯ ಯೋಗ ' ಎಂಬಲ್ಲಿ ಬಹುಮತವಿದೆ. ಮಧುಸೂದನಸರಸ್ವತಿಗಳು ಮಾತ್ರ ' ಸರ್ವಗೀತಾರ್ಥಸೂತ್ರಣ ' ಎನ್ನುತ್ತಾರೆ. ಇದಕ್ಕೆ ಕಾರಣವಿಷ್ಟೆ. ೩೦ ನೇ ಶ್ಲೋಕದವರೆಗೆ ಸಾಂಖ್ಯ—ಆತ್ಮಾನಾತ್ಮ ವಿವೇಕವಿರುವುದು. ನಲವತ್ತನೇ ಶ್ಲೋಕದಿಂದ ಯೋಗವು ಹೇಳಲ್ಪಡುವುದು. ಐವತ್ನಾಲ್ಕನೇ ಶ್ಲೋಕದಿಂದ ಸ್ಥಿತಪ್ರಜ್ಞನ ಲಕ್ಷಣವೂ ಬ್ರಾಹ್ಮೀಸ್ಥಿತಿಯೂ ವರ್ಣಿಸಲ್ಪಡುವುವು. ಗೀತೆಯಲ್ಲಿ ಹೇಳಲ್ಪಡುವ ವಿಷಯವೆಲ್ಲಾ ಬಂದಿರುವುದರಿಂದ ಇದು ಸರ್ವಗೀತಾರ್ಥಸೂತ್ರಣವಾಯಿತು. ಸಾಂಖ್ಯವೂ ಯೋಗವೂ ಜೋಡಿಸಲ್ಪಟ್ಟಿರುವುದರಿಂದ ಸಾಂಖ್ಯಯೋಗವಾಯಿತು.

ಮೂರನೆಯ ಅಧ್ಯಾಯ — 'ಕರ್ಮಯೋಗ' ಇದರಲ್ಲಿ ಅಭಿಪ್ರಾಯ ಭೇದವಿಲ್ಲ

ನಾಲ್ಕನೆಯ ಅಧ್ಯಾಯ — ಶ್ರೀ ಶಂಕರರ ಮತದಂತೆ 'ಜ್ಞಾನಕರ್ಮಸಂನ್ಯಾಸಯೋಗ' ಜ್ಞಾನವನ್ನೂ, ಕರ್ಮವನ್ನೂ ಬ ಹಾ. ರ್ಪಣಮಾಡುವದರಿಂದ — ಈಶ.ರಾರ್ಪಣಮಾಡುವುದರಿಂದ

ನಾಲ್ಕು ಮತ್ತು ಐದನೆಯ ಅಧ್ಯಾಯಗಳು ಜೊತೆಯಾಗಿಯೇ ಇರುವುವು

ಆರನೆಯ ಅಧ್ಯಾಯ — 'ಆತ್ಮ ಸಂಯಮ ಯೋಗವು' ಇದನ್ನು ಧ್ಯಾನಯೋಗವೆಂದೂ ಕರೆಯುತ್ತಾರೆ

ಏಳನೆಯ ಅಧ್ಯಾಯ — ಇದು 'ಜ್ಞಾನವಿಜ್ಞಾನಯೋಗವು' ಈ ಹೆಸರು ಎಲ್ಲರಿಗೂ ಒಪ್ಪಿಗೆಯಾಗಿದೆ

ಎಂಟನೆಯ ಅಧ್ಯಾಯ — 'ಅಕ್ಷರಬ್ರಹ್ಮಯೋಗವು' ಇದೂ ಸರ್ವಸಮ್ಮತವೇ

ಒಂಬತ್ತನೆಯ ಅಧ್ಯಾಯ — ' ರಾಜವಿದ್ಯಾ ರಾಜಗುಹ್ಯ ಯೋಗವು '

ಹತ್ತನೆಯ ಅಧ್ಯಾಯ — ' ವಿಭೂತಿಯೋಗವು '

ಹನ್ನೊಂದನೆಯ ಅಧ್ಯಾಯ – ' ವಿಶ್ವರೂಪದರ್ಶನಯೋಗವು '

ಹನ್ನೆರಡನೆಯ ಅಧ್ಯಾಯ — ' ಭಕ್ತಿಯೋಗವು '

ಹದಿಮೂರನೆಯ ಅಧ್ಯಾಯ — ' ಕ್ಷೇತ್ರಕ್ಷೇತ್ರಜ್ಞವಿಭಾಗ ಯೋಗವು. ' ಶ್ರೀ ಶಂಕರಾಚಾರ್ಯರು ಮೂಲದಲ್ಲಿ ಪ್ರಕೃತಿಪುರುಷ ಯೋಗವೆಂದು ಕರೆದು ಭಾಷ್ಯದಲ್ಲಿ ಕ್ಷೇತ್ರ ಕ್ಷೇತ್ರಜ್ಞಯೋಗವೆಂದು ಹೇಳಿದ್ದಾರೆ

ಹದಿನಾಲ್ಕನೆಯ ಅಧ್ಯಾಯ — ' ಗುಣತ್ರಯ ವಿಭಾಗ ಯೋಗವು '

ಹದಿನೈದನೆಯ ಅಧ್ಯಾಯ — ' ಪುರುಷೋತ್ತಮಯೋಗವು '

ಹದಿನಾರನೆಯ ಅಧ್ಯಾಯ — ' ದೈವಾಸುರ ಸಂಪದ್ವಿಭಾಗ ಯೋಗವು '

ಹದಿನೇಳನೆಯ ಅಧ್ಯಾಯ — ' ಶ್ರದ್ಧಾತ್ರಯ ವಿಭಾಗ ಯೋಗವು. ' ಇದರಲ್ಲಿ ಒಮ್ಮತವಿದ್ದರೂ ಮಧುಸೂದನಸರಸ್ವತಿಗಳೂ ಶ್ರೀಧರಸ್ವಾಮಿಗಳೂ ಯೋಗಶಬ್ದಕ್ಕೆ ಬದಲಾಗಿ ವಿವರಣ ಎಂದು ಬರೆದಿದ್ದಾರೆ

ಹದಿನೆಂಟನೆಯ ಅಧ್ಯಾಯ — 'ಮೋಕ್ಷಸಂನ್ಯಾಸಯೋಗವು' ಮೋಕ್ಷ ಮತ್ತು ಸಂನ್ಯಾಸಗಳು ಇದರಲ್ಲಿ ಜೋಡಿಸಲ್ಪಟ್ಟಿವೆ. ಸಂಸಾರ ಬಂಧನದಿಂದ ಮುಕ್ತನಾಗಲು ತ್ಯಾಗವೂ, ಸಂನ್ಯಾಸವೂ ಜೊತೆಗೂಡಬೇಕು ಎಂಬುದೇ ಇದರ ಅಭಿಪ್ರಾಯವು

---

# ಅರ್ಜುನವಿಷಾದಯೋಗದ ವೈಶಿಷ್ಟ್ಯ



ಭಗವದ್ಗೀತೆಯು ಪ್ರಾರಂಭವಾಗಿರುವುದು ಕುರುಡರಾಜ ಧೃತರಾಷ್ಟ್ರನ ಪ್ರಶ್ನೆಯಿಂದ, "ಧರ್ಮಕ್ಷೇತ್ರೇ ಕುರುಕ್ಷೇತ್ರೇ' ಕೊನೆಮುಟ್ಟಿರುವುದು ಸಂಜಯನ ಅಂತಿಮ ಮಂಗಳಗೀತೆಯಲ್ಲಿ "ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ । ತತ್ರ ಶ್ರೀರ್ವಿಜಯೋ ಭೂತಿ ರ್ಧ್ರುವಾ ನೀತಿರ್ಮತಿರ್ಮಮ ॥" ಮಾಯಾಧೀಶನಾದ ಶ್ರೀಕೃಷ್ಣನು ಎಲ್ಲಿರುವನೋ ಯಾವಲ್ಲಿ ಧನುರ್ಧರನಾದ ಪಾರ್ಥನಿರುವನೋ ಅಲ್ಲಿ ಲಕ್ಷ್ಮಿಯೂ, ಜಯವೂ, ಏಳಿಗೆಯೂ, ನೀತಿಯೂ ಶಾಶ್ವತವಾಗಿ ನೆಲೆಸಿರುವುವೆಂಬುದು ನನ್ನ ಅಭಿಪ್ರಾಯವು

ಪ್ರತಿಯೊಂದು ಗ್ರಂಥಕ್ಕೂ ಒಂದೊಂದು ಮಂಗಳಶ್ಲೋಕವು ಪ್ರಾರಂಭದಲ್ಲಿರುವುದು ವಿಘ್ನೇಶ್ವರ, ಶಾರದೆ ಮುಂತಾದ ಇಷ್ಟದೇವತೆಗಳ ಪ್ರಾರ್ಥನೆಯಿಂದ ಪ್ರಾರಂಭಿಸುವುದು ವಾಡಿಕೆ. ಇದು ಪ್ರಾರಂಭವಾಗಿರುವುದು " ಧರ್ಮಕ್ಷೇತ್ರೇ " ಎಂಬುದರಿಂದ. ವ್ಯಾಸಮಹರ್ಷಿಗಳು ತಮ್ಮ ಬ್ರಹ್ಮಸೂತ್ರಗಳನ್ನು "ಅಥಾತೋ ಬ್ರಹ್ಮಜಿಜ್ಞಾಸಾ" ಎಂದು ಪ್ರಾರಂಭಿಸಿದ್ದಾರೆ ಇತರ ಸೂತ್ರ ಕಾರರೂ ಅದನ್ನೇ ಅನುಸರಿಸಿದ್ದಾರೆ ಉಪನಿಷತ್ತುಗಳು ಪ್ರಾರಂಭವಾಗಿರುವುದು "ಓಂ" ಕಾರದಿಂದ

ಪ್ರತಿಯೊಂದು ಗ್ರಂಥಕಾರರೂ ಒಂದೊಂದು ವಿಶೇಷ ದೃಷ್ಟಿಯಿಂದ ಗ್ರಂಥವನ್ನು ಬರೆಯುತ್ತಾರೆ. ವ್ಯಾಸರು ಈ

ಭಗವದ್ಗೀತೆಯನ್ನು ಪ್ರಾರಂಭಮಾಡುವುದಕ್ಕೆ ಯಾವುದೋ ಒಂದು ಮಹತ್ತಾದ ಉದ್ದೇಶ್ಯವಿರಲೇಬೇಕು ಆ ಉದ್ದೇಶ್ಯವನ್ನು ಸಾರ್ಥಕಗೊಳಿಸುವುದಕ್ಕಾಗಿ ಮಹಾಭಾರತದ ಯುದ್ಧರಂಗದ ಸನ್ನಿವೇಶವನ್ನು ಸಿದ್ಧಮಾಡಿಕೊಂಡು, ಅರ್ಜುನನನ್ನು ನೆಪ ಮಾಡಿಕೊಂಡು ಪ್ರಾರಂಭಿಸಿದ್ದಾರೆ ಗೀತಾಸ್ತೋತ್ರದಲ್ಲಿ "ಸಮಸ್ತ ಉಪನಿಷತ್ತುಗಳಿಂದ ಕೂಡಿರುವುದೊಂದು ಗೋವು ಹಾಲು ಕರೆಯಲು ಕುಳಿತಿರುವವನು ಗೋಪಾಲನಂದನನು ಅರ್ಜುನನು ಕರುವು ಗೋವಿನಿಂದ ಬರುವ ಅಮೃತವನ್ನು ಕುಡಿಯುವವರು ಸಾ ಧ ಕ– ಜ್ಞಾ ನಿ – ಭ ಕ್ತ ವೃ ಂ ದ ವು" ಎಂದು ಹೇಳಿರುವ ಅಲಂಕಾರೋಕ್ತಿಯು ಬಹಳ ಅರ್ಥಗರ್ಭಿತವಾಗಿದೆ ಅರ್ಜುನನು ಹೆಸರಿಗೆ ಮಾತ್ರ ಈ ಗ್ರಂಥದ ಫಲವು ಸಮಸ್ತ ಮಾನವ ಜಾತಿಯ ಅಂತಃಕರಣಕ್ಕೆ ಪ್ರಾಪ್ತವಾಗಬೇಕು ಇದೇ ವ್ಯಾಸರ ಉದ್ದೇಶ್ಯ "ಧರ್ಮಕ್ಷೇತ್ರೇ ಕುರುಕ್ಷೇತ್ರೇ" ಎಂದು ಪ್ರಾರಂಭ ಮಾಡಿರುವುದರಲ್ಲಿ ಯಾವ ಮಹತ್ತಾದ ಉದ್ದೇಶ್ಯವಿರಬಹುದು ? ಕುರುಕ್ಷೇತ್ರವು ಕರ್ಮಕ್ಷೇತ್ರವು ಹೇಗೆಯೋ ಧರ್ಮಕ್ಷೇತ್ರವೂ ಹಾಗೆಯೇ ಅಹುದು ಕುರುಕ್ಷೇತ್ರದ ಯುದ್ಧದಲ್ಲಿ ಧರ್ಮವು ನಿರ್ಣಯವಾಗ ಬೇಕು ಅಧರ್ಮವು ಸಮೂಲನಾಶವಾಗಬೇಕು ಜಗತ್ತಿನಲ್ಲಿ ಶಾಂತಿಯ ಹೊಸ ವಾತಾವರಣವು ಸಿದ್ಧವಾಗಬೇಕು.

ಎಲ್ಲ ಧರ್ಮೋಪದೇಶವೂ ಮನುಷ್ಯನಿಗೇ ಮೃಗಕ್ಕಲ್ಲ. ಮನುಷ್ಯನು ಈಗ ಪಶುವಾಗಿದ್ದಾನೆ ಅದಕ್ಕಿಂತ ಕಡೆಯಾಗಿ ದ್ದಾನೆ. ಮನುಷ್ಯದೇಹವು ಪರಮಾತ್ಮನ ಪವಿತ್ರ ಮ ಂ ದಿ ರ ಅತ್ಯಂತ ಸುಂದರವಾದ ಸುಭದ್ರವಾದ ಸಮಸ್ತ ಅನುಕೂಲ

ಗಳಿಂದಲೂ ಸಜ್ಜಿತವಾದ ಜಗತ್ತಿನ ಸಮಸ್ತ ಶಕ್ತಿಗಳನ್ನೂ ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಆನಂದಿಸಬಲ್ಲ ಅಥವಾ ಪ್ರತಿ ಸೃಷ್ಟಿಯನ್ನೇ ಮಾಡಬಲ್ಲ ಯೋಗ್ಯತೆಯನ್ನು ಹೊಂದಿರುವ "ಪವಿತ್ರ ದೇವಮಂದಿರ" ಇದು ಈಗ ಪಿಶಾಚಿಯ ಕಾರಸ್ಥಾನವಾಗಿದೆ ಅಹಂಕಾರ-ಅಭಿಮಾನದ ಪಿಶಾಚಿಯು ಇದರ ಮೇಲೆ ಸಂಪೂರ್ಣ ಅಧಿಕಾರಮಾಡುತ್ತಿದೆ ದಂಭ-ದರ್ಪ-ಅ ಭಿ ಮಾ ನ-ಕ್ರೋಧ-ಪಾರುಷ್ಯ ಮುಂತಾದ ದುಷ್ಟಶಕ್ತಿಗಳು—ದುರ್ಯೋಧನಾದಿಗಳ ಗುಂಪು ಇದರ ಮೇಲೆ ಸರ್ವಾಧಿಕಾರ ಮಾಡುತ್ತಿವೆ ಇವುಗಳು ಹುಟ್ಟಿರುವುದು "ತಮೋಗುಣದ ಮಗನಾದ ಧೃತರಾಷ್ಟ್ರನ ವೀರ್ಯದಿಂದ" ಇವು ಅಂತಃಕರಣ ರಾಜ್ಯದಲ್ಲಿ ಅಧಿಕಾರಮಾಡುತ್ತಿರುವವರೆಗೂ ಶಾಂತಿಯೂ ಇಲ್ಲ ಸುಖವೂ ಇಲ್ಲ ಪರಮಾತ್ಮನ ಅನುಗ್ರಹವೂ ಇಲ್ಲ

ಹೆಸರಿಗೆ ಮಾತ್ರ ಪಾಂಡುವಿನ ಮಕ್ಕಳೆನಿಸಿದರೂ ಸತ್ತ್ವಗುಣದ ಶಕ್ತಿಗಳಾದ ಯಮ, ವಾಯು, ಇಂದ್ರ, ಅಶ್ವಿನೀದೇವತೆಗಳ ಅನುಗ್ರಹದಿಂದ ಹುಟ್ಟಿದ ಪಾಂಡವರು, ಧರ್ಮ, ಬಲ, ವೀರ್ಯ, ಭಕ್ತಿ, ಜ್ಞಾನ ಪ್ರವೃತ್ತಿಗಳು ಅಂತಃಕರಣ ರಾಜ್ಯದಲ್ಲಿ ಆಧಿಪತ್ಯ ಮಾಡಲಾರಂಭಿಸಿದರೆ ಮಾತ್ರ ಈ ದೇಹವು ದೇವಮಂದಿರವಾದೀತು ಈ ಪಾಂಡವರಲ್ಲಿ ವೀರ್ಯ ಪ್ರವೃತ್ತಿಯಾದ ಅರ್ಜುನನದೇ ಮುಖ್ಯ ಪಾತ್ರ ಆತನು ರಥಿ ಧರ್ಮೋದ್ಧರಣಕ್ಕಾಗಿ ಅವತಾರಮಾಡಿ ಅದಕ್ಕಾಗಿ ಸೊಂಟ ಕಟ್ಟಿರುವ ಶ್ರೀಕೃಷ್ಣ ಮಹಾಪ್ರಭುವಾದ ಭಗವಂತನು ಸಾರಥಿಯಾಗಿ ನಿಂತು ಅವನಿಗೆ ಉಪದೇಶಮಾಡುತ್ತಿದ್ದಾನೆ

ನೆಂಟರ ಮೇಲಿನ ಮೋಹದಿಂದ ಬಿಲ್ಲುಬಾಣಗಳನ್ನು ಕೆಳಗಿಟ್ಟ ಅರ್ಜುನನಿಗೆ ಜ್ಞಾನೋಪದೇಶಮಾಡಿ ಆತನ ಮೋಹವನ್ನು ನಿವೃತ್ತಿಮಾಡಿ ಕರ್ತವ್ಯ ಕರ್ಮವನ್ನು ಮಾಡಿಸುತ್ತಾನೆ

ಅರ್ಜುನ ವಿಷಾದದ ಹಿನ್ನೆಲೆಯು ಅರ್ಥಗರ್ಭಿತವಾಗಿದೆ. ನಮ್ಮ ದೇಹವು ಕುರುಕ್ಷೇತ್ರ, ಕರ್ಮಕ್ಷೇತ್ರ, ಧರ್ಮಕ್ಷೇತ್ರವೂ ಆಹುದು ಅಂತಃಕರಣ ರಾಜ್ಯದಲ್ಲಿ ಪ್ರತಿನಿಮಿಷವೂ ದಂಭ ದರ್ಪ ಮುಂತಾದ ಆಸುರೀ ಶಕ್ತಿಗಳಿಗೂ ಧರ್ಮ, ಬಲ, ವೀರ್ಯ, ಭಕ್ತಿ ಜ್ಞಾನದೂಪವಾದ ದೈವೀ ಶಕ್ತಿಗಳಿಗೂ ಯುದ್ಧವಾಗುತ್ತಿದೆ ತಮೋಗುಣದ ಕುರುಡರಾಜನಿಂದ-ರಜೋಗುಣದ ಆತನ ಮಕ್ಕಳಿಂದ ಅಂತಃಕರಣರಾಜ್ಯವನ್ನು ಜಯಿಸಿ ಕಿತ್ತುಕೊಳ್ಳಲು ಧರ್ಮ ಮುಂತಾದ ಸಾತ್ವಿಕಪ್ರವೃತ್ತಿಗಳೇ ಅಧಿಕಾರಿಗಳು ಪಾರ್ಥ ಸಾರಥಿಯಾದ ಪರಮಾತ್ಮನು ವೀರ್ಯಶಕ್ತಿಯಾದ ಅರ್ಜುನನೊಡನೆ ಈ ದೇಹರೂಪೀ ರಥದಲ್ಲಿ ಕುಳಿತು ವ್ಯವಹಾರಮಾಡುತ್ತಾನೆ ದಂಭ ದರ್ಪಾದಿಗಳು ಹೂಡುವ ವಿವಿಧ ಕಪಟಜಾಲವನ್ನೆಲ್ಲಾ ಎದುರಿಸಿ ಜಯಶಾಲಿಗಳಾಗಬೇಕಾದರ ಅಪಾರವಾದ ವೀರ್ಯಶಕ್ತಿಯು ಬೇಕು ಅದರ ಹಿಂದೆಯೇ ಇದ್ದು ಜ್ಞಾನೋಪದೇಶಮಾಡುತ್ತಿರುವವನೇ ಮಹಾಪ್ರಭುವು-ಜಗದೀಶನು-ಯೋಗೀಶ್ವರನು

ಅರ್ಜುನನಿಗೆ ಬಂದಂತೆ ನಮಗೂ ಮೋಹವು ಬರುತ್ತದೆ ಅನೇಕ ಜನ್ಮಗಳಿಂದಲೂ ನಮ್ಮೊಡನಾಡಿದ ಅಭಿಮಾನ-ಅಹಂಕಾರವೂ ಅವರ ಮರಿಗಳಾದ ದಂಭ ದರ್ಪ ಮುಂತಾದ ಬಲವತ್ತರ ಶತ್ರುಗಳೂ ನಮ್ಮೊಡನಾಡುತ್ತಿರುವುದರಿಂದ ಅವುಗಳನ್ನು ಓಡಿಸುವುದು, ನಾಶಮಾಡುವುದು ಹೇಗೆ ? ಎಂಬ ಸಂಶಯವೂ

ಬರುತ್ತದೆ ಅಭಿಮಾನ ಪಿಶಾಚಿಯು ಒಮ್ಮೊಮ್ಮೆ ದೇವರ ವೇಷ ವನ್ನೇ ಹಾಕಿಕೊಂಡು ನಮ್ಮನ್ನು ಮೋಸಗೊಳಿಸುತ್ತಿರುವುದರಿಂದ ಅದರ ಸ್ವರೂಪವನ್ನು ಚೆನ್ನಾಗಿ ತಿಳಿದು ಅದನ್ನು ನಿರ್ದಾಕ್ಷಿಣ್ಯ ವಾಗಿ ಎದುರಿಸಲು ಶಕ್ತರಾಗಬೇಕು ಧರ್ಮ, ಬಲ, ವೀರ್ಯ, ಭಕ್ತಿ ಜ್ಞಾನ ಪ್ರವೃತ್ತಿಗಳು ಅಂತಃಕರಣದಲ್ಲಿ ಸಂಪೂರ್ಣಾಧಿ ಕಾರ ಮಾಡಬೇಕು ಆಗ ಮಾತ್ರ ಇದು ಧರ್ಮಕ್ಷೇತ್ರವೂ ಆಗುವುದು, ಪವಿತ್ರ ದೇವಮಂದಿರವೂ ಆಗುವುದು

ಅದಕ್ಕಾಗಿಯೇ ಮುಂದಿನ ಅಧ್ಯಾಯಗಳಲ್ಲಿ ಭಗವಂತನ ಉಪದೇಶವು ಪ್ರಾರಂಭವಾಗುವುದು

ಈ ಅಧ್ಯಾಯವು ಆತನ ಉಪದೇಶಕ್ಕೆ ಹಿನ್ನೆಲೆ ಪೀಠಿಕೆ ಮಾತ್ರ—

---

# ಸಾಂಖ್ಯಯೋಗದ ವೈಶಿಷ್ಟ್ಯ



ಪರಮಾತ್ಮನ ಉಪದೇಶವು ಪ್ರಾರಂಭವಾಗುವುದು ಈ ಅಧ್ಯಾಯದ ಹನ್ನೊಂದನೆಯ ಶ್ಲೋಕದಿಂದ ೧೧ ರಿಂದ ೩೦ರ ವರೆಗೆ ೨೦ ಶ್ಲೋಕಗಳಲ್ಲಿ ಸಾಂಖ್ಯತತ್ತ್ವ ವಿವೇಚನೆಯೂ, ೩೧ ರಿಂದ ೩೯ರವರೆಗೆ ೯ ಶ್ಲೋಕಗಳಲ್ಲಿ ಕ್ಷಾತ್ರಧರ್ಮ ಬೋಧಕ ಸಾಮಾನ್ಯ ಉಪದೇಶವೂ, ೪೦ ರಿಂದ ೫೩ರವರೆಗೆ ಸಮತ್ತ್ವಬುದ್ಧಿ ರೂಪವಾದ ಯೋಗವೂ, ೫೪ ರಿಂದ ೭೨ರವರಗೆ ಸ್ಥಿತಪ್ರಜ್ಞನ ಲಕ್ಷಣವೂ ತಿಳಿಸಲ್ಪಟ್ಟಿವೆ ಇದರಲ್ಲಿ ಇಪ್ಪತ್ತು ಶ್ಲೋಕಗಳು ಮಾತ್ರ ಸಾಂಖ್ಯ–ವಿಚಾರಕ್ಕೆ ಸಂಬಂಧಪಟ್ಟವು ಉಳಿದ ೫೨ ಶ್ಲೋಕಗಳು ಬೇರೆ—

ಸಾಂಖ್ಯ —ಸಾಂಖ್ಯತತ್ತ್ವಜ್ಞಾನವು (ಸಮ್ಯಕ್+ಖ್ಯಾಯತೇ) ಯುಕ್ತಿಗಳಿಂದ ಸಮರ್ಥಿಸಲ್ಪಟ್ಟಿದೆ ಆದುದರಿಂದದು ಸಾಂಖ್ಯ (ಸಮ್ಯಕ್+ಖ್ಯಾನಂ) ಪಾಯಿತು ಇದರ ಮುಖ್ಯ ಆಶಯವು "ಏಕಾತ್ಮವಾದವು" ಆತ್ಮನು ಒಬ್ಬನೇ ಆತನು ಸರ್ವಗತನು ಆತನು ದೇಹಾದಿಗಳಿಂದ ಭಿನ್ನನು ದೇಹಗಳು ಅಂತವಂತ ಸುಖದುಃಖ, ಜನ್ಮ–ಮರಣ, ಲಾಭ–ನಷ್ಟ ಮುಂತಾದುವು ಗಳೆಲ್ಲಾ ಇದಕ್ಕೆ ಮಾತ್ರ ಆತ್ಮನು ನಿರ್ಲಿಪ್ತನು ವೇದಾಂತ ಶಾಸ್ತ್ರದಲ್ಲಿ ದೇಹತ್ರಯವನ್ನು ಗುರ್ತಿಸುತ್ತಾರೆ ಅವುಗಳನ್ನೇ ಕೋಶಪಂಚಕವೆಂದು ಪುನರ್ವಿಂಗಡನೆಮಾಡಿ ಅನಾತ್ಮವೆಂದು

ಕಳೆದು ಅವುಗಳನ್ನು ಮೀರಿ ಅವುಗಳ ವಿಕಾರಕ್ಕೆ ಸಿಕ್ಕದಿರುವ ಸಾಕ್ಷಿ ಸ್ವರೂಪನೇ ಆತ್ಮನೆಂದು ಸಿದ್ಧಾಂತಮಾಡುತ್ತಾರೆ. ಆದರೆ ಭಗವದ್ಗೀತೆಯಲ್ಲಿ ಅನಾತ್ಮ ವಸ್ತುಗಳನ್ನೆಲ್ಲಾ ವರ್ಣನೆಮಾಡುವಾಗ ಪಂಚಮಹಾ ಭೂತಗಳೂ, ಅಹಂಕಾರ ಬುದ್ಧಿ ಅವ್ಯಕ್ತ ಮೂಲಪ್ರಕೃತಿ ಮನಸ್ಸು ಶ್ರೋತ್ರಾದಿ ಹತ್ತು ಇಂದ್ರಿಯಗಳೂ, ಅವುಗಳ ಐದು ವಿಷಯಗಳೂ, ಇಚ್ಛಾ–ದ್ವೇಷ ಸುಖ–ದುಃಖ ಪಾಂಚಭೌತಿಕ ಸಂಘಾತವಾದ (ಮಾನುಷೀ) ದೇಹ, ಚೇತನಾ ಧೃತಿ = ಈ ರೀತಿ ಮೂವತ್ತೆರಡು ತತ್ತ್ವಗಳನ್ನೆಲ್ಲಾ ಸೇರಿಸಿ ಕ್ಷೇತ್ರವೆಂದೂ, ಈ ಕ್ಷೇತ್ರದಿಂದ ಹೊರಗಾಗಿ ಕ್ಷೇತ್ರವನ್ನು ತಿಳಿಯುವವನನ್ನು ಕ್ಷೇತ್ರಜ್ಞನೆಂದೂ, ಹದಿಮೂರನೆಯ ಅಧ್ಯಾಯದಲ್ಲಿ ವಿವರಿಸಿರುವುದನ್ನೇ, ಈ ಅಧ್ಯಾಯದಲ್ಲಿ ಸಾಂಖ್ಯತತ್ತ್ವ ವಿಚಾರ ಮಾಡುವ ಇಪ್ಪತ್ತು ಶ್ಲೋಕಗಳಲ್ಲಿ ದೇಹಿ, ದೇಹ ಎಂಬ ಎರಡು ಗುಂಪುಗಳಾಗಿ ವಿಂಗಡಿಸಿ, ದೇಹಿಯಾದ ಆತ್ಮನು ಸರ್ವವ್ಯಾಪಿಯಾಗಿ, ಅಖಂಡನಾಗಿ, ಅಚಲನಾಗಿ, ಜನ್ಮಾದಿವಿಕಾರಗಳಿಲ್ಲದೆ ನಿತ್ಯನಾಗಿ, ಶಾಶ್ವತನಾಗಿ, ಅಜನಾಗಿ, ಅವಿನಾಶಿಯಾಗಿ, ಸ್ಥಿರನಾಗಿ, ಅವ್ಯಕ್ತ ಅಚಿಂತ್ಯ ಅಪ್ರಮೇಯ ಪುರಾಣಪುರುಷನಾಗಿರುವನೆಂದೂ ಸ್ಪಷ್ಟಪಡಿಸಿ, ಜನ್ಮ–ಮರಣಾದಿಗಳೆಲ್ಲಾ ದೇಹಕ್ಕೇ ಆದುದರಿಂದ ಯಾರಿಗೂ ಯಾರೂ ಯಾವ ಸಂದರ್ಭದಲ್ಲಿಯೂ ದುಃಖಿಸುವ ಕಾರಣವೇ ಇಲ್ಲವೆಂದೂ ಸಿದ್ಧಾಂತಮಾಡಿದ್ದಾರೆ.

ಯೋಗ:—

"ಸಿದ್ಧ್ಯಸಿದ್ಧ್ಯೋಃಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ" (೪೮)

"ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ" |
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ||"
(೫೦)

"ಯೋಗಸ್ಥಃ ಕುರು ಕರ್ಮಾಣಿ ಸಙ್ಗಂತ್ಯಕ್ತ್ವಾ ಧನಂಜಯ |"
(೪೮)

ಎನ್ನುವ ಮಾತುಗಳು ಗೀತೆಯ ಯೋಗದ ಸ್ವರೂಪವನ್ನು ತೋರಿಸುತ್ತವೆ.

"ಸಿದ್ಧಿ ಅಸಿದ್ಧಿಗಳಲ್ಲಿ ಸಮವಾಗಿರು".

"ಈ ಸಮತ್ವವೇ ಯೋಗವು. ಹೀಗೆ ಸಮಬುದ್ಧಿಯಿಂದೊಡಗೂಡಿದ ಮನುಷ್ಯನು ಸುಖ-ದುಃಖಗಳೆರಡನ್ನೂ ತ್ಯಾಗಮಾಡುತ್ತಾನೆ. ಆದುದರಿಂದ ನೀನು ಈ ಯೋಗವನ್ನು ಆಚರಣೆ ಮಾಡು. ಕರ್ಮಮಾಡುವುದರಲ್ಲಿರುವ ಕುಶಲತೆಯೇ ಯೋಗವು".

"ಸಿದ್ಧಿ-ಅಸಿದ್ಧಿ, ಜಯಪರಾಜಯ ಮುಂತಾದ ಜೊತೆ ಜೊತೆಯಾಗಿ ಬರುವ ಅನುಭವಗಳನ್ನು ತ್ಯಜಿಸಿ ಎಲ್ಲ ಅನುಭವಗಳನ್ನೂ 'ಸಮಭಾವದಿಂದ' ಸ್ವೀಕರಿಸುವುದೇ ಯೋಗವು. ಕರ್ಮಗಳನ್ನು ಮಾಡುತ್ತಿದ್ದರೂ ಅವುಗಳ ಕಟ್ಟಿಗೆ ಸಿಕ್ಕದಂತೆ, ಮಾಡಿಕೊಳ್ಳುವ ಉಪಾಯರೂಪವಾದ ಕರ್ಮ ಕೌಶಲ್ಯವೇ ಯೋಗವು.

ಕರ್ಮಯೋಗದ ಸೂತ್ರಗಳು ನಾಲ್ಕು:—

(೧) ಕರ್ಮಮಾಡುವುದರಲ್ಲಿ ನಿನ್ನ ಅಧಿಕಾರವಿದೆ.

(೨) ಅದರ ಫಲದಲ್ಲಿಲ್ಲ.

(೩) ಆದುದರಿಂದ ಅದರ ಫಲದಲ್ಲಿ ಆಶೆಪಡಬೇಡ.

(೪) ಕರ್ಮಮಾಡದೆಯೂ ಇರಬೇಡ.

ಈ ಯೋಗ ಸಿದ್ಧಿಯಾಗಬೇಕಾದರೆ ಸಾಂಖ್ಯಬುದ್ಧಿ ಯೊಡನೆ ಯೋಗಬುದ್ಧಿಯು ಜೊತೆಯಾಗಬೇಕು. ನಾನು ನಿರ್ವಿಕಾರನಾದ ಅವಿನಾಶೀ ಆತ್ಮನೆಂದೂ, ಸುಖ-ದುಃಖ ಜನ್ಮ ಮರಣಾದಿಗಳೆಲ್ಲಾ ದೇಹಕ್ಕೆ ಸಂಬಂಧಿಸಿದವುಗಳೆಂದೂ ತಿಳಿದು ತನ್ನ ಪ್ರಪಂಚ ವ್ಯಾಪಾರದಲ್ಲಿ ಬರುವ ಸಿಹಿ-ಕಹಿ ಅನುಭವಗಳನ್ನು ಶಾಂತಿಯಿಂದ, ಸಮತ್ವ ಬುದ್ಧಿಯುಕ್ತ ಯೋಗದಿಂದ ಸಹಿಸುತ್ತಾ ಆನಂದದಿಂದಲೇ ಸ್ವೀಕರಿಸಬೇಕು. ಇದರಿಂದ ಕರ್ಮಬಂಧವನ್ನು ತಪ್ಪಿಸಿಕೊಳ್ಳಬಹುದು.

ಸ್ಥಿತಪ್ರಜ್ಞ:—ಈ ಯೋಗದಲ್ಲಿ ನಿಂತಿರುವವನೇ ಸ್ಥಿತಪ್ರಜ್ಞನು. ಆತನು ಯಾವ ವಿಷಯ ಭೋಗದ ಮೋಹಕ್ಕೂ ಸಿಕ್ಕದಂತಿರುವನು. ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವನು. ಸಮುದ್ರರಾಜನಂತೆ ಗಂಭೀರನಾಗಿ, ಶಾಂತನಾಗಿ, ನಿರ್ವಿಕಾರನಾಗಿರುವುದರಿಂದ ಸಮಸ್ವರೂಪನಾದ ಅಖಂಡ ಪರಿಪೂರ್ಣಾತ್ಮನಲ್ಲಿಯೇ ಸದಾರಮಣ ಮಾಡುತ್ತಿರುವುದರಿಂದ ಬ್ರಾಹ್ಮೀಸ್ಥಿತಿಯಲ್ಲಿ ನಿಂತಿರುವನು. ಈ ಸ್ಥಿತಿಯು ಸಾಮಾನ್ಯರಾದವರಿಗೆ ಸಾಧ್ಯವಿಲ್ಲ. ಅಸಾಧಾರಣವಾದ ಸಾಧನೆಯೂ, ಶಕ್ತಿಯೂ, ಪುಣ್ಯಫಲವೂ ಒದಗಿರಬೇಕು. ಕಡೇಪಕ್ಷ ಮರಣ ಕಾಲದಲ್ಲಿಯಾದರೂ ಈ ಸ್ಥಿತಿಯು ಪ್ರಾಪ್ತವಾದರೂ ಸಾಕು. ಮೋಕ್ಷಪದವಿಗೆ ಅಧಿಕಾರಿಯಾಗುವನು.

---

# ಕರ್ಮಯೋಗದ ವೈಶಿಷ್ಟ್ಯ



ಈ ಅಧ್ಯಾಯವು ಭಗವದ್ಗೀತೆಯಲ್ಲಿ ಹೇಳಲ್ಪಡುವ ಕರ್ಮಯೋಗದ ರಹಸ್ಯವನ್ನೆಲ್ಲಾ ಒಳಗೊಂಡಿಪಯಾದುದರಿಂದ ಇದಕ್ಕೆ ಈ ಹೆಸರು ಬಂದಿದೆ ಗೀತೆಯ ಸ್ವರೂಪವನ್ನು ಇದು ಸ್ಪಷ್ಟರೂಪದಿಂದ ತಿಳಿಸುತ್ತದ ಕರ್ಮವನ್ನೇಕೆ ಮಾಡಬೇಕು ? ಹೇಗೆ ಮಾಡಬೇಕು ? ಏನನ್ನು ಮಾಡಬೇಕು ? ಮಾಡಲು ಯೋಗ್ಯವಾದ ಶ್ರೇಷ್ಠ ಕರ್ಮವು ಯಾವುದು ? ಮುಂತಾದ ವಿಷಯಗಳು ಇದರಲ್ಲಿ ಸ್ಪಷ್ಟವಾಗಿ ತಿಳಿಸಲ್ಪಟ್ಟಿವೆ

ಅರ್ಜುನನಿಗೆ ಯುದ್ಧಮಾಡುವುದರಿಂದ ಭೀಷ್ಮ ದ್ರೋಣಾದಿ ಗುರುಗಳನ್ನು ಕೊಲ್ಲುವುದು ಪಾಪವೆಂಬ ಭಾವವು ಬಂದಾಗ ಅರ್ಜುನನ ಮೋಹವನ್ನು ಬಿಡಿಸುವುದಕ್ಕಾಗಿ "ಆತ್ಮನು ಜನ್ಮಮರಣಾದಿ ವಿಕಾರ ರಹಿತನು ಈ ಜನಗಳು ಹಿಂದೆಯೂ ಇದ್ದರು , ಮುಂದೆಯೂ ಇರುವರು. ಕೊಲ್ಲುವುದು ಕೊಲ್ಲಿಸಿಕೊಳ್ಳುವುದು ದೇಹ ಮಾತ್ರ ಆದುದರಿಂದ ಯಾರನ್ನು ಯಾರೂ ಕೊಲ್ಲಲಾರರು" ಎಂದು ತಿಳಿಸಿ ಸಾಂಖ್ಯತತ್ತ್ವಜ್ಞಾನವನ್ನು ಹೇಳಿ "ನಿನ್ನ ಅಧಿಕಾರವು ಕರ್ಮಮಾಡುವುದರಲ್ಲಿ ಮಾತ್ರ ನೀನು ಯುದ್ಧಮಾಡು ಜ್ಞಾನಕ್ಕಿಂತ ಕರ್ಮವು ಹೆಚ್ಚಿನದಲ್ಲವಾದರೂ ಅದನ್ನು ಬಿಡಕೂಡದು ಸುಖ, ದುಃಖ, ಲಾಭ-ನಷ್ಟ, ಜಯ-ಪರಾಜಯಗಳನ್ನು ಒಂದಾಗಿ ತಿಳಿದು ಯುದ್ಧಮಾಡು ನಿರ್ಮಮನಾಗಿ, ನಿರಹಂಕಾರನಾಗಿ, ನಿಃಸ್ಪೃಹ

ನಾಗಿ, ನಿಷ್ಕಾಮನಾಗಿರುವುದರಿಂದ ಬ್ರಾಹ್ಮೀಸ್ಥಿತಿಯು ಪ್ರಾಪ್ತ ವಾಗುವುದು" ಎಂದು ಮುಂತಾಗಿ ಹೇಳಿದಾಗ ಅರ್ಜುನನ ಮನಸ್ಸಿನಲ್ಲಿ ಕರ್ಮಕ್ಕಿಂತ ಜ್ಞಾನವು ಶ್ರೇಷ್ಠವಾದರೆ ಆ ಹಿಂಸಾರೂಪ ಕರ್ಮವನ್ನೇಕೆ ಮಾಡಬೇಕು ? ಎಂಬ ಮುಂತಾದ ಸಂಶಯವು ಹುಟ್ಟಿದುದರಿಂದ ಅರ್ಜುನನ ಪ್ರಶ್ನೆಯಿಂದ ಈ ಅಧ್ಯಾಯವು ಪ್ರಾರಂಭವಾಗುತ್ತದೆ.

ಅರ್ಜುನನ ಪ್ರಶ್ನೆಯು ಎರಡು ಶ್ಲೋಕಗಳಲ್ಲಿ; ಒಂದರೊಳಗೆ ಒಂದು ಬೆರಕೆಯಾದಂತಿರುವ ಜ್ಞಾನಕರ್ಮಗಳ ಮಾತಿನಿಂದ ತನ್ನ ಬುದ್ಧಿಯು ಭ್ರಮಿಸಿರುವುದರಿಂದ ತನಗೆ ನಿಶ್ಚಯವಾಗಿ ಶ್ರೇಯಸ್ಸಿಗೆ ಸಾಧನೆಯಾದ ಒಂದು ಮಾರ್ಗವನ್ನು ತಿಳಿಸಬೇಕೆಂದು ಕೇಳುತ್ತಾನೆ. ಮೂರನೆಯದರಲ್ಲಿ, ಪರಮಾತ್ಮನು ಜ್ಞಾನನಿಷ್ಠೆ, ಯೋಗನಿಷ್ಠೆಗಳೆಂಬ ಎರಡು ನಿಷ್ಠೆಗಳಿರುವುವೆಂದೂ, ಅವು ಬೇರೆ ಬೇರೆ ಮನಃಪ್ರವೃತ್ತಿಯವರಿಗೆ ಹೇಳಿದುವುಗಳೆಂದೂ ತಿಳಿಸು ತ್ತಾನೆ. ನಾಲ್ಕನೆಯದರಲ್ಲಿ, ಯಾವ ನಿಷ್ಠೆಯಲ್ಲಿಯೂ ಕರ್ಮವನ್ನು ಸ್ವರೂಪದಿಂದ ತ್ಯಾಗಮಾಡಲಾಗದೆಂದೂ, ಐದನೆಯದರಲ್ಲಿ ಯಾರು ಯಾವ ನಿಮಿಷದಲ್ಲಿಯೂ ಏನನ್ನೂ ಮಾಡದೆ ಇರಲು ಸಾಧ್ಯವಿಲ್ಲ ವೆಂದೂ, ಆರನೆಯದರಲ್ಲಿ ಕರ್ಮೇಂದ್ರಿಯಗಳನ್ನು ತಡೆದು, ಮನಸ್ಸಿನಲ್ಲಿ ವಿಷಯಚಿಂತನೆಮಾಡುವುದು ಮಿಥ್ಯಾಚಾರವೆಂದೂ, ಏಳನೆಯದರಲ್ಲಿ ಮನಸ್ಸಿನಿಂದ ಇಂದ್ರಿಯಗಳನ್ನು ಬಿಗಿಹಿಡಿದು ಕರ್ತವ್ಯಕರ್ಮದಲ್ಲಿ ಅವುಗಳನ್ನು ತೊಡಗಿಸುವುದು ಶ್ರೇಷ್ಠವೆಂದೂ, ಎಂಟನೆಯ ಮತ್ತು ಒಂಭತ್ತನೆಯ ಶ್ಲೋಕಗಳಲ್ಲಿ ಕರ್ಮಮಾಡದೆ ಇರುವುದಕ್ಕಿಂತ ಮಾಡುವುದೇ ಉತ್ತಮವೆಂದೂ ಹೇಳಲ್ಪಟ್ಟಿದೆ. ಕರ್ಮಮಾಡದೆ ಶರೀರ ನಿರ್ವಾಹವೂ ಅಸಂಭವವೆಂದೂ, ಆದುದರಿಂದ ಅನಾಸಕ್ತಿ ಭಾವದಿಂದ ಕರ್ಮಗಳನ್ನು ಮಾಡಬೇಕೆಂದೂ ತಿಳಿಸಲ್ಪಟ್ಟಿದೆ

ಹತ್ತರಿಂದ ಹನ್ನೆರಡನೆಯ ಶ್ಲೋಕಗಳವರೆಗೆ ಸೃಷ್ಟಿಕರ್ತನ ಆಜ್ಞೆಯಂತೆ ಕರ್ಮಗಳ ಅವಶ್ಯಕತೆಯನ್ನು ಗುರ್ತಿಸಿ ಹದಿಮೂರನೆಯ ದರಲ್ಲಿ ಯಜ್ಞಶೇಷವನ್ನು ಉಣ್ಣುವುದರಿಂದ, ಪಾಪಗಳಿಂದ ಮುಕ್ತನಾಗುವನೆಂದೂ ಯಜ್ಞಮಾಡದಿರುವವನು ಪಾಪಿಯೆಂದೂ ತಿಳಿಸಿ ಹದಿನಾಲ್ಕು ಹದಿನೈದನೆಯ ಶ್ಲೋಕಗಳಲ್ಲಿ ಸೃಷ್ಟಿಚಕ್ರ ವನ್ನು ವರ್ಣಿಸಿ, ಸರ್ವವ್ಯಾಪಿಯಾದ ಪರಮೇಶ್ವರನು ಯಜ್ಞರೂಪ ಸಾಧನೆಯಲ್ಲಿ ಸದಾ ಪ್ರತಿಷ್ಠಿತನಾಗಿರುವನೆಂಮೂ ಹೇಳಿದೆ. ಹದಿನಾರನೆಯದರಲ್ಲಿ ಸೃಷ್ಟಿಚಕ್ರವನ್ನು ಅನುಸರಿಸದಿರುವವರ ನಿಂದೆಯು ಹೇಳಲ್ಪಟ್ಟಿದೆ.

ಹದಿನೇಳು ಹದಿನೆಂಟನೆಯ ಶ್ಲೋಕಗಳಲ್ಲಿ ಜ್ಞಾನನಿಷ್ಠನಾದ ಮಹಾತ್ಮನಿಗೆ ಕರ್ಮದ ಅಭಾವವನ್ನು ಹೇಳಿ ಆತನು ಮಾಡಿದರೂ ಮಾಡದಿದ್ದರೂ ಆತನಿಗಾವ ಪ್ರಯೋಜನವೂ ಇಲ್ಲವೆಂದು ತಿಳಿಸಿ ಹತ್ತೊಂಬತ್ತರಲ್ಲಿ ಮೇಲೆ ಹೇಳಲ್ಪಟ್ಟ ಕಾ ರ ಣ ಗ ಳಿ ಂ ದ ಕರ್ಮ ಮಾಡುವ ಅವಶ್ಯಕತೆಯನ್ನು ಸಿದ್ಧಮಾಡಿ, ನಿಷ್ಕಾಮಕರ್ಮದ ಫಲವು ಪರಮಾತ್ಮ ಪ್ರಾಪ್ತಿಯೆಂಮೂ, ಆದುದರಿಂದ ಅರ್ಜುನನು ಅನಾಸಕ್ತ ಭಾವದಿಂದ ಕರ್ಮಮಾಡಬೇಕೆಂಮೂ ಆಜ್ಞೆಮಾಡಿದೆ. ಇಪ್ಪತ್ತರಲ್ಲಿ ಜನಕಾದಿಗಳು ಕರ್ಮದಿಂದಲೇ ಸಿದ್ಧಿಹೊಂದಿದರೆಂದು ಪ್ರಮಾಣ ವನ್ನು ಕೊಟ್ಟು ಲೋಕಸಂಗ್ರಹಕ್ಕಾಗಿ ಕರ್ತವ್ಯ-ಕರ್ಮಮಾಡು ವುದು ಅವಶ್ಯಕವೆಂದು ಹೇಳಿ, ಲೋಕಸಂಗ್ರಹದ ಸಾರ್ಥಕತೆ ಯನ್ನು ಸಿದ್ಧಪಡಿಸಿದೆ. ಇಪ್ಪತ್ತೊಂದರಲ್ಲಿ ಶ್ರೇಷ್ಠನಾದವನ ಆಚರಣೆ ಉಪದೇಶಗಳನ್ನು ಇತರರು ಅನುಸರಿಸುವರೆಂದು ಹೇಳಿ ಇಪ್ಪತ್ತೆರಡರಿಂದ ಇಪ್ಪತ್ತನಾಲ್ಕರವರೆಗೆ ಭಗವಂತನು ತನ್ನ ಸ್ವಂತ ಉದಾಹರಣೆಯನ್ನು ಕೊಟ್ಟು, ಕರ್ಮಮಾಡುವುದರ ಲಾಭವನ್ನೂ

ಮಾಡದಿರುವುವರ ನಷ್ಟವನ್ನೂ ಸ್ಪಷ್ಟಪಡಿಸಿದ್ದಾನೆ. ಇಪ್ಪತ್ತೈದು ಇಪ್ಪತ್ತಾರರಲ್ಲಿ ಜ್ಞಾನಿಯು ಲೋಕ ಸಂಗ್ರಹಕ್ಕಾಗಿ ತಾನೇ ಕರ್ಮ ಮಾಡಬೇಕೆಂದೂ, ಇತರರಿಂದ ಮಾಡಿಸಬೇಕೆಂದೂ ಹೇಳಿದೆ. ಇಪ್ಪತ್ತೇಳರಲ್ಲಿ ಅಜ್ಞಾನಿಯು ಪ್ರಕೃತಿಯ ಗುಣಗಳ ಕಾರ್ಯವನ್ನು ತನ್ನ ಮೈಮೇಲೆ ಹಾಕಿಕೊಳ್ಳುವನೆಂದೂ, ಇಪ್ಪತ್ತೆಂಟರಲ್ಲಿ ತತ್ತ್ವ ಜ್ಞಾನಿಯು ಪ್ರ ಕೃ ತಿ ಯ ಗುಣಗಳು ತಂತಮ್ಮ ವ್ಯಾಪಾರ ಮಾಡುವುವೆಂದು ತಿಳಿಯುತ್ತಾನೆಂದೂ ಆದುದರಿಂದ ಪ್ರಕೃತಿಯ ಗುಣಗಳಿಂದ ಮೋಹಿತರಾದ ಅಜ್ಞಾನಿಗಳನ್ನು ತತ್ತ್ವವಿದನು ತನ್ನ ನಡತೆಯಿಂದ ಭ್ರಾಂತಿಗೆ ಸಿಕ್ಕಿಸಬಾರದೆಂದೂ ತಿಳಿಸಿದೆ. ಮುವ್ವತ್ತ ರಿಂದ ಮುವ್ವತ್ತೆರಡರವರೆಗೆ ಆಶಾ, ಮಮತಾ, ಸಂತಾಪಗಳನ್ನು ಬಿಟ್ಟು ಯುದ್ಧಮಾಡಬೇಕೆಂದು ಅರ್ಜುನನಿಗೆ ತಿಳಿಸಿ, ಮೇಲೆ ಹೇಳಿದ ಅಭಿಪ್ರಾಯವನ್ನು ಅನುಸರಿಸುವ ಶ್ರದ್ಧಾಳುಗಳು ಮುಕ್ತ ರಾಗುವರೆಂದೂ, ಹಾಗೆ ಮಾಡದಿರುವ ದೋಷದರ್ಶಿಗಳು ಕೆಡು ವರೆಂದೂ ಸೂಚಿಸಿದೆ. ಮೂವತ್ಮೂರು, ಮೂವತ್ನಾಲ್ಕನೆಯದರಲ್ಲಿ ಪ್ರಕೃತಿಯ ಸ್ವಭಾವವನ್ನು ತಿಳಿಸಿ, ರಾಗದ್ವೇಷಗಳು ಇಂದ್ರಿಯ ವ್ಯವಹಾರದಲ್ಲಿ ಮನೆಮಾಡಿಕೊಂಡಿರುವುದರಿಂದ ಅವುಗಳ ಕೈಗೆ ಸಿಕ್ಕಬಾರದೆಂದೂ, ಮೂವತ್ತೈದರಲ್ಲಿ ಉತ್ತಮವಾಗಿ ತೋರುವ ಪರಧರ್ಮಕ್ಕಿಂತಲೂ, ಕನಿಷ್ಠವಾಗಿ ತೋರುವ ಸ್ವಧರ್ಮವೇ ಶ್ರೇಷ್ಠ ವೆಂದೂ ಸ್ಪಷ್ಟಪಡಿಸಿದೆ. ಮೂವತ್ತಾರರಲ್ಲಿ ಅರ್ಜುನನು, ತನಗೆ ಇಚ್ಛೆ ಇಲ್ಲದಿದ್ದರೂ ಮನುಷ್ಯನಿಂದ ಬಲಾತ್ಕಾರವಾಗಿ ಪಾಪ ಮಾಡಿಸುವ ಶಕ್ತಿಯು ಯಾವುದೆಂದು ಕೇಳುತ್ತಾನೆ. ಮೂವತ್ತೇಳ ರಿಂದ ನಲವತ್ತೊಂದರವರೆಗೆ ಎರಡು ತಲೆಯ ಹಾವಿನಂತೆ ಇರುವ ಕಾಮವನ್ನೂ-ಕ್ರೋಧವನ್ನೂ ವರ್ಣಿಸಿ, ಅದರ ಕೈಗೆ

ಸಿಕ್ಕಬಾರದೆಂದು ತಿಳಿಸಿದೆ. ನಲತ್ತೆರಡು ನಲವತ್ತೊಂದನೆಯ ಶ್ಲೋಕ ಗಳಲ್ಲಿ ದೇಹೇಂದ್ರಿಯ ಮನೋ ಬುದ್ಧಿಗಳನ್ನು ಮೀರಿದ ಆತ್ಮನೇ ಎಲ್ಲಕ್ಕೆ ಶ್ರೇಷ್ಠನೆಂದೂ, ಆ ಆತ್ಮನನ್ನೇ ತಿಳಿದು ಕಾಮರೂಪಿ ಯಾದ ಪ್ರಬಲ ಶತ್ರುವನ್ನು ನಾಶಮಾಡಬೇಕೆಂದೂ ಹೇಳಿದೆ.

ಸಂಕ್ಷೇಪವಾಗಿ ಅಧ್ಯಾಯದ ಸಾರವನ್ನು ಈ ರೀತಿ ಗುರ್ತಿಸಬಹುದು.

೧. ಭೋಗೇಚ್ಛೆಯ ಸಂಯಮವನ್ನು ಧರ್ಮದಿಂದ ಮಾಡ ಬೇಕು. ಕಾಮವು ದುರ್ಜಯವಾದುದು, ಪಾಪದಲ್ಲಿ ಪ್ರೇರಿಸುವುದು. ಆದುದರಿಂದ ಅದು ಮನುಷ್ಯನ ಶತ್ರುವು. ಸಂಯಮದಿಂದ ಅದನ್ನು ಜಯಿಸಿ, ಆತ್ಮಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು.

೨. "ಪ್ರಕೃತಿಯ ಗುಣಗಳಿಂದ ಕರ್ಮವು ನಡೆಯುತ್ತಿದೆ. ಈ ಗುಣಗಳಿಲ್ಲದೇ ಮನುಷ್ಯನೇನನ್ನೂ ಮಾಡಲಾರನು" ಎಂದು ಭಾವಿಸಿ, ಅಹಂಕಾರವನ್ನು ತ್ಯಜಿಸಿ, ದೇಹೇಂದ್ರಿಯ ಮನಸ್ಸುಗಳಿಂದ ನಡೆಯುವ ಕಾರ್ಯಗಳಿಗೆ ತಾನು ಕರ್ತನಲ್ಲವೆಂದು ತಿಳಿಯಬೇಕು.

೩. ಪ್ರಕೃತಿಯ ಸ್ವಭಾವವನ್ನು ಅನುಸರಿಸಿಯೇ ಕರ್ಮವು ನಡೆ ಯುವುದಾದ್ದರಿಂದ, ತನ್ನ ಸ್ವಭಾವಕ್ಕನುಸರಿಸಿದ ಮನೋನಿಷ್ಠೆಯಿಂದ ಒಡಗೂಡಿದ ಕರ್ಮವನ್ನು ದಕ್ಷತೆಯಿಂದ ಮಾಡಬೇಕು.

೪. ತನ್ನ ಸಹಜ ಕರ್ತವ್ಯಕ್ಕೆ ಪ್ರತಿಕೂಲವಾದ ಯಾವ ಕರ್ಮವನ್ನೂ ಕಪಟಬುದ್ಧಿಯಿಂದ ಮಾಡಬಾರದು.

೫. ತನ್ನ ಸಹಜ ಧರ್ಮವನ್ನು ನಡೆಯಿಸುವಾಗ ಮೃತ್ಯುವು ಬಂದರೂ ಅದನ್ನು ಆನಂದದಿಂದಲೇ ಸ್ವೀಕರಿಸಬೇಕು.

೬ ಮನುಷ್ಯನು ಸ್ವರೂಪದಿಂದ ಕರ್ಮತ್ಯಾಗಮಾಡುವುದು ಶಾಧ್ಯವೇ ಇಲ್ಲ ಆದುದರಿಂದ ವಿವೇಕಿಯು ಕರ್ಮತ್ಯಾಗಮಾಡ ಬಾರದು

೭ ಯಜ್ಞಾರ್ಥವಾಗಿ (ದೀನ ಅತಿಥಿ, ಮಹಾತ್ಮ, ಅನಾಥ, ದುಃಖೀ, ದರಿದ್ರ ಸೇವಾರೂಪೀ) ಕರ್ಮವನ್ನು ಖಂಡಿತವಾಗಿ ಮಾಡಲೇ ಬೇಕು

೮ ಲೋಕಸಂಗ್ರಹಕ್ಕಾಗಿ (ಸಮಾಜ, ರಾಷ್ಟ್ರ, ಪ್ರಪಂಚ ಸೇವೆಗಾಗಿ) ಕರ್ಮಮಾಡಬೇಕು,

೯ ತನ್ನ ಸಮಸ್ತ ಕರ್ಮಗಳನ್ನೂ ಭಗವದರ್ಪಣವಾಗಿ ಮಾಡುವುದೂ, ತನ್ನೆದುರಿಗೆ ಪರಮೇಶ್ವರನಿರುವನೆಂದು ಭಾವಿಸುವುದೂ, ಮನುಷ್ಯನು ತನ್ನ ಉನ್ನತಿಗಾಗಿ ಮಾಡುವ ಸರ್ವೋತ್ತಮವಾದ ಉಪಾಯವು

೧೦ ಹೀಗೆ ಕರ್ಮಮಾಡುವುದರಿಂದ ಮನುಷ್ಯನು ಆತ್ಮರತ ನಾಗಿ, ಆತ್ಮತೃಪ್ತನಾಗಿ, ಆತ್ಮಸಂತುಷ್ಟನಾಗುವನು ಈ ಸ್ಥಿತಿಯು ಬಂದಮೇಲೆ ಆತನು ಮಾಡಬೇಕಾದ ಕರ್ಮವಾವುದೂ ಇರುವುದಿಲ್ಲ ಯಾವ ಕರ್ಮಮಾಡಿದರೂ ಭಯವಿಲ್ಲ ಆ ಕರ್ಮದ ಲೇಪವು ಅವನಿಗಾಗುವುದಿಲ್ಲ



# ಕರ್ಮ ಸಂನ್ಯಾಸಯೋಗದ ವೈಶಿಷ್ಟ್ಯ



ಇದರಲ್ಲಿ ಕರ್ಮಯೋಗವೂ, ಸಂನ್ಯಾಸಯೋಗವೂ ಹೇಳಲ್ಪಡುತ್ತವೆ ಮೊದಲನೆಯ ಶ್ಲೋಕದಲ್ಲಿ ಅರ್ಜುನನು "ಕರ್ಮ ಸಂನ್ಯಾಸವನ್ನು ಒಮ್ಮೆ ಕರ್ಮಯೋಗವನ್ನು ಮತ್ತೊಮ್ಮೆ ನೀನು ಪ್ರಶಂಸೆ ಮಾಡುತ್ತಿರುವೆ ಅವೆರಡರಲ್ಲಿ ನನಗೆ ಯಾವುದು ಶ್ರೇಯಸ್ಕರವಾದುದು? ಅದೊಂದನ್ನು ಹೇಳು" ಎಂದು ಕೇಳುತ್ತಾನೆ ಅದಕ್ಕೆ ಉತ್ತರವಾಗಿ ಪರಮಾತ್ಮನು ಎರಡನೇ ಶ್ಲೋಕದಿಂದ ಐದನೇ ಶ್ಲೋಕದವರೆಗೆ ಸಂನ್ಯಾಸವೂ ಕರ್ಮಯೋಗವೂ ಒಂದೇ ಎಂದೂ, ಅವೆರಡರಲ್ಲಿ ಭೇದಮಾಡಬಾರದೆಂದೂ, ಸಂನ್ಯಾಸದಲ್ಲಿ ಆಗುವ ಫಲವು ಕರ್ಮಯೋಗದಿಂದಲೇ ಬರುವುದೆಂದೂ, ಈ ಎರಡನ್ನೂ ಬೇರೆಬೇರೆಯಾಗಿ ತಿಳಿಯುವವರು ಅವಿವೇಕಿಗಳೆಂದೂ ತಿಳಿಸುತ್ತಾನೆ ಆರನೇ ಶ್ಲೋಕದಲ್ಲಿ ಯೋಗದ ಸಹಾಯವಿಲ್ಲದೆ ಕರ್ಮ ಸಂನ್ಯಾಸವು ಬಲು ಕಷ್ಟಕರವಾಗುವುದೆಂದು ಎಚ್ಚರಿಕೆ ಕೊಡುತ್ತಾನೆ ಏಳರಿಂದ ಇಪ್ಪತ್ತರವರೆಗೆ ಕರ್ಮಯೋಗಿಗೂ, ಕರ್ಮಸಂನ್ಯಾಸಮಾಡುವ ಸಾಂಖ್ಯಯೋಗಿಗೂ ಅತ್ಯವಶ್ಯಕವಾಗಿರುವ ಮನೋಭಾವವನ್ನು ವರ್ಣಿಸುತ್ತಾನೆ. ಇಪ್ಪತ್ತೊಂದರಿಂದ ಇಪ್ಪತ್ತೆಂಟರ ಪೂರ್ತಿ ಕರ್ಮಸಂನ್ಯಾಸಮಾಡಿದ ಸಾಂಖ್ಯಯೋಗಿಯ ಸ್ವರೂಪವನ್ನು ತಿಳಿಸುತ್ತಾನೆ ಕೊನೆಯ ಇಪ್ಪತ್ತೊಂಬತ್ತನೆಯ ಶ್ಲೋಕದಲ್ಲಿ ಸಮಸ್ತ ಯಜ್ಞ–ತಪಸ್ಸುಗಳನ್ನು ಅನುಭವಿಸುವವನು ಸರ್ವಲೋಕ ಮಹೇಶ್ವರನಾದ

ಪರಮಾತ್ಮನೇ ಎಂದೂ ಆತನೇ ಎಲ್ಲ ಪ್ರಾಣಿಗಳ–ಸಹಜ ಪರಮ ಮಿತ್ರನೆಂದೂ ಹೇಳಿದಮೇಲೆ ಅಧ್ಯಾಯವು ಕೊನೆಗೊಳ್ಳುತ್ತದೆ.

"ಸಂನ್ಯಾಸವೂ ಕರ್ಮಯೋಗವೂ ಎರಡೂ ಮೋಕ್ಷಪ್ರಾಪ್ತಿಯ ಸಾಧನಗಳಾದರೂ ಕರ್ಮಯೋಗವು ಹೆಚ್ಚಿನದು." ಅರ್ಜುನನಂತಹ ವನಿಗೆ ಕರ್ಮಯೋಗವೇ ಹೆಚ್ಚು ಉಪಕಾರಿಯಾದುದು.

(೧) ದ್ವೇಷಮಾಡದೇ ಇರಬೇಕು.

(೨) ಏನನ್ನೂ ಅಪೇಕ್ಷಿಸಬಾರದು.

(೩) ದ್ವಂದ್ವಾತೀತನಾಗಿರಬೇಕು— ದ್ವೈತಭಾವರಹಿತ ನಾಗಿರಬೇಕು.

ಈ ಮೂರೂ ನಿತ್ಯಸಂನ್ಯಾಸಿಯ ಲಕ್ಷಣಗಳು. ಈ ನಿತ್ಯ ಸಂನ್ಯಾಸಕ್ಕೆ ತಳಹದಿ "ಸರ್ವಭೂತಾತ್ಮಭೂತಾತ್ಮಸ್ಥಿತಿ". ಯಾವನು ಸಂಪೂರ್ಣ ಜಗತ್ತಿನಲ್ಲೆಲ್ಲಾ ತುಂಬಿರುವನೋ ಅವನೇ ಪ್ರತಿಯೊಂದು ದೇಹದಲ್ಲೂ ವಾಸಮಾಡುತ್ತಿರುವನು. ಯಾವ ಪ್ರಾಣಿಯನ್ನು ದ್ವೇಷಮಾಡಿದರೂ ಅದು ಪರಮಾತ್ಮನನ್ನು ದ್ವೇಷ ಮಾಡಿದಂತೆಯೇ. ಅಖಂಡ ಪರಿಪೂರ್ಣ ಪರಮಾತ್ಮನೇ ಸಮಸ್ತ ಸುಖಸ್ವರೂಪನೆಂದು ತಿಳಿದನಂತರ ಏನನ್ನು ಇಚ್ಛಿಸಬೇಕು ? ಅಂದರೆ, ಈ ಸರ್ವಭೂತಾತ್ಮೈಕ್ಯಭಾವವು ಉದಯವಾದರೆ ಉಳಿದ ಎರಡು ಲಕ್ಷಣಗಳೂ ಇದರೊಡನೆಯೇ ಸಿದ್ಧವಾಗುವುವು. ಈತನು ಸಿದ್ಧ–ನಿತ್ಯಸಂನ್ಯಾಸಿ. ಈ ಸ್ಥಿತಿಯನ್ನು ಹೊಂದಲೆತ್ನಿಸಿ ಇಂದ್ರಿಯಗಳನ್ನು ತಡೆದು ಸಾಧನೆಮಾಡುವ ಸಾಧಕನು ಅನಿತ್ಯ ಸಂನ್ಯಾಸಿ. ಈತನು ಕೊನೆಯವರೆಗೂ ಎಚ್ಚರಿಕೆಯಾಗಿ ಸಾಧನೆ ಮಾಡಬೇಕು ಇಲ್ಲದಿದ್ದರೆ ಪತನವು ಸಿದ್ಧ.

ಕಾಮ ಕ್ರೋಧಗಳ ವೇಗವನ್ನು ತಡೆಯುವುದು ಬಲು ಕಷ್ಟ. ಅದನ್ನಾವನು ತಡೆಯಲು ಶಕ್ತನಾಗುವನೋ ಆತನು ಇಲ್ಲಿಯೇ–ಈ ಜನ್ಮದಲ್ಲಿಯೇ ಜಗತ್ತನ್ನು ಜಯಿಸಿ ಪರಮ ಶಾಂತಿಯನ್ನು ಹೊಂದಲು ಶಕ್ತನಾಗುವನು.

ಮನಸ್ಸಿನ ಪ್ರವೃತ್ತಿಯನ್ನು ಅಂತರ್ಮುಖವಾಗಿ ಮಾಡಿ, ಬಾಹ್ಯ ಪ್ರವೃತ್ತಿಯನ್ನು ತಡೆದು, ಸಾಧನೆಮಾಡುವುದು ಬ್ರಹ್ಮಯೋಗ. "ಸರ್ವತ್ರ ಪರಬ್ರಹ್ಮನಿದ್ದಾನೆ. ಜಗತ್ತೆಲ್ಲವೂ ಬ್ರಹ್ಮಮಯ". ಎಂಬ ಅನುಭವವನ್ನು ಹೊಂದಿ, ಆ ಬ್ರಹ್ಮನೇ ತನ್ನೊಳಗಿದ್ದಾನೆಂದು ತಿಳಿದು, ಆ ಬ್ರಹ್ಮನೊಡನೆ ತನ್ನಾತ್ಮವನ್ನು ಸೇರಿಸುವುದು ಬ್ರಹ್ಮಯೋಗ. ಆದುದರಿಂದ ಬ್ರಹ್ಮಯೋಗಯುಕ್ತಾತ್ಮನಾಗಬೇಕಾದರೆ (೫–೨೬) ತನ್ನ ಆತ್ಮನನ್ನು ಬ್ರಹ್ಮನೊಡನೆ ನಿರಂತರವೂ ಸೇರಿಸುತ್ತಿರುವ ಯೋಗಮಾಡುತ್ತಾ ಆ ಬ್ರಹ್ಮನನ್ನು ಒಂದು ಕ್ಷಣವೂ ಮರೆಯದಂತೆ ಚಿಂತಿಸುತ್ತಾ ಇರುವುದರಿಂದ "ಬ್ರಹ್ಮಪರಾಯಣತೆಯು" ಸಿದ್ಧವಾಗುತ್ತದೆ. ಸಂಸಾರಿಯಾದವನು ಸದಾ ಸಂಸಾರದ - ಸುಖದುಃಖಗಳನ್ನೇ ಚಿಂತಿಸುತ್ತಿರುವಂತೆ, ಈ ಸಾಧಕ ಯೋಗಿಯು ಸದಾ "ಸರ್ವತ್ರ ಪರಿಪೂರ್ಣ ಶುದ್ಧಾದ್ವೈತಾತ್ಮನನ್ನೇ–ಪರಬ್ರಹ್ಮನನ್ನೇ ಚಿಂತಿಸುತ್ತಿರಬೇಕು. ಹೀಗೆ ಬ್ರಹ್ಮಪರಾಯಣನಾದವನು ಸದಾ ಇದೇ ಸಾಧನೆಯನ್ನೇ ಮುಂದರಿಸಿ ಅಕ್ಷಯ ಸುಖವನ್ನು ಹೊಂದುತ್ತಾನೆ. ಬ್ರಹ್ಮಪರಾಯಣನಾದ ಯೋಗಿಯು ಯಾವಾಗಲೂ ಎಂಥಾ ಸಂದರ್ಭದಲ್ಲಿಯೂ ಸಾಂಸಾರಿಕ ಭೋಗಗಳ ಸಿಕ್ಕಿಗೆ ಸಿಕ್ಕುವುದಿಲ್ಲ. ಆತನ ದೃಷ್ಟಿಯಲ್ಲಿ ಸಂಸಾರವೂ-ಅದರ. ಭೋಗ

ಗಳೂ ತುಚ್ಛ. ಎಲ್ಲ ಭೋಗಗಳೂ ಸಂಸ್ಪರ್ಶದಿಂದ-ಇಂದ್ರಿಯ ವಿಷಯಗಳ ಸಂಬಂಧದಿಂದ ಹುಟ್ಟುವುವು.

ಸ್ಪರ್ಶಗಳಲ್ಲಿ ಮೂರು ಭೇದ. ಸ್ಪರ್ಶ, ಸಂಸ್ಪರ್ಶ, ಕುಸ್ಪರ್ಶ ಎಂದು. ಸ್ಪರ್ಶ ಎಂಬುದು ಸಾಮಾನ್ಯ ಸಂಬಂಧ. ಸಂಸ್ಪರ್ಶ ಎಂಬುದು ಚೆನ್ನಾಗಿ ಮನಸ್ಸಿಗೆ ಒಪ್ಪಿಗೆಯಾಗುವಂತೆ ಆಗುವ ಸಂಬಂಧ. ಕುಸ್ಪರ್ಶ ಎಂಬುದು ಮನಸ್ಸಿಗೆ ಬೇಡ ವಾಗುವಂತೆ—ದುಃಖವಾಗುವಂತೆ ಆಗುವ ಸಂಬಂಧ. ಕುಸ್ಪರ್ಶ ವನ್ನಾರೂ ಇಚ್ಛಿಸುವುದಿಲ್ಲ. ಸ್ಪರ್ಶದಿಂದ ತೃಪ್ತಿಯಾಗುವುದಿಲ್ಲ. ಸಂಸ್ಪರ್ಶದಿಂದಲೇ ಆನಂದವಾಗಬೇಕಾದರೆ. ಮನುಷ್ಯನು ವಿಷಯ ಗಳ ಅಭಿಮಾನದಲ್ಲಿ ಸಿಕ್ಕಿಕೊಳ್ಳಬೇಕಾದರೆ ಅದು "ಸಂಸ್ಪರ್ಶವೇ ಆಗಿರಬೇಕು". ಈ ಸಂಸ್ಪರ್ಶದಿಂದ ಯಾವ ಸುಖವು ಆಗು ತ್ತಿರುವುದೆಂದು ಮನುಷ್ಯನು ಭ್ರಮಿಸುತ್ತಾನೋ ಅದು ನಿಜವಾದ ಸುಖವಲ್ಲ. ಮಿಶ್ರಿತ ಸುಖವು ಸುಖದುಃಖಗಳೆರಡನ್ನೂ ಕೊಟ್ಟು ಆಸೆಯನ್ನು ವೃದ್ಧಿಮಾಡುವುದು. ಆದುದರಿಂದ ಭೋಗಗಳಲ್ಲಿ ಸಿಕ್ಕುವುದು ಯೋಗ್ಯವಲ್ಲ. ಈ ಭೋಗಗಳಿಗೆ ಪರಿಮಿತಿ ಇದೆ. ಅವು ಕ್ಷಣಭಂಗುರವಾದವುಗಳು.

ಸ್ಪರ್ಶದಿಂದಾಗುವ ಸುಖವು ಎಲ್ಲರ ಅನುಭವದಲ್ಲಿಯೂ ಇದೆ. ಚಳಿಯಾದಾಗ ಬೆಚ್ಚನೆಯ ಬಟ್ಟೆಯನ್ನು ಹಾಕಿಕೊಳ್ಳುವ ಅಪೇಕ್ಷೆಯಾಗುತ್ತದೆ. ಚಳಿಯಿರುವವರೆಗೆ ಮಾತ್ರ ಈ ಬೆಚ್ಚನೆಯ ಉಣ್ಣೆ-ಕಂಬಳಿ ಮುಂತಾದ ಬಟ್ಟೆಗಳ ಉಪಯೋಗ. ಚಳಿಯು ಹೊರಟುಹೋದೊಡನೆಯೇ ಈ ಬಟ್ಟೆಗಳಿಂದುಂಟಾಗುವ ಸುಖವೂ ಹೊರಟುಹೋಗುತ್ತದೆ. ಏಕೆಂದರೆ ಇದು ಸಂಸ್ಪರ್ಶದಿಂದುಂಟಾಗುವ ಸುಖವು. ಹೊಟ್ಟೆಯಲ್ಲಿ ಹಸಿವಾಗಿರುವಾಗ ರುಚಿರುಚಿಯಾದ

ಆಹಾರದಿಂದ ಸುಖವಾಗಬಹುದು. ಹೊಟ್ಟೆಯು ತುಂಬಿ ಹಸಿವು ನಿವಾರಣೆಯಾದನಂತರ ಈ ಸುಖವೂ ಹಸಿವೆಯೊಡನೆಯೇ ಮಾಯವಾಗುತ್ತದೆ. ಹೀಗೆ ಎಲ್ಲ ವಿಧವಾದ ಅನುಭವಗಳನ್ನೂ ಗುರ್ತಿಸಬಹುದು. ಉತ್ತಮಸ್ಪರ್ಶದಿಂದ, ಸಂಸ್ಪರ್ಶದಿಂದ ಮಾತ್ರ ಸುಖವಾಗುವುದೆಂದು ಭಾವಿಸಬಾರದು. ಸುಖದ ಸ್ಪರ್ಶದ ವಾಸನೆಯಿಂದಲೇ ಮನಸ್ಸಿನಲ್ಲಿ ಸುಖದ ಅನುಭವವಾಗುವುದು. ಈ ವಾಸನೆಯು ತನ್ನೊಳಗಿನಿಂದಲೇ ಹುಟ್ಟುವುದು. ವಾಸನೆ ಯಿಲ್ಲದೆ, ಅದು ಒಳಗಿನಿಂದ ಬಂದಲ್ಲದೆ ಹೊರಗಿನ ಯಾವ ಸಂಸ್ಪರ್ಶವೂ ಸುಖದಾಯಕವಾಗಲಾರದು. ಆದುದರಿಂದ ತಿಳಿಯಬೇಕಾದುದೇನೆಂದರೆ

(೧) ತನ್ನೊಳಗೆ ಇಚ್ಛೆಯು ಹುಟ್ಟಬೇಕು.

(೨) ಅದಕ್ಕೆ ಅನುಕೂಲವಾದ ವಿಷಯ ಭೋಗದ ಸಂಸ್ಪರ್ಶವು ಸಿಗಬೇಕು. ಹೀಗಾದರೇ ಸುಖವು ಸಿಕ್ಕಬೇಕಾದರೆ. ಇಲ್ಲದಿದ್ದರೆ ಅದಾಗದು. ಆದುದರಿಂದ ಈ ಸಂಸ್ಪರ್ಶದ ಸುಖವು ಅನಿತ್ಯ. ಇಚ್ಛೆಯು ಇಲ್ಲದಿದ್ದರೆ, ಎದುರಿಗೆ ವಿಷಯವು ಇಲ್ಲದಿದ್ದರೆ, ಅದರಲ್ಲಿ ಮನಸ್ಸು ಬೆರೆಯದಿದ್ದರೆ ಸುಖವಾಗುವು ದಿಲ್ಲ. ಇಚ್ಛೆಯು ತೃಪ್ತಿಯಾದಮೇಲೆಯೂ ಆ ಸಂಸ್ಪರ್ಶದಲ್ಲಿ ಸುಖವಿರುವುದಿಲ್ಲ. ಒಂದೇ ವಿಷಯವನ್ನು ಸತತವಾಗಿ ಅನುಭವಿಸು ತ್ತಿದ್ದರೆ ಹಿಂದಿನಂತೆ ಸುಖವು ಆಗುವುದಿಲ್ಲ. ಕ್ರಮೇಣ ಕಡಿಮೆ ಯಾಗುವುದು. ಈ ಅನಿತ್ಯ ಸುಖದ ಭ್ರಾಂತಿಯನ್ನು ಕಡಿಮೆ ಮಾಡಿ ನಿತ್ಯ ಸುಖಕ್ಕೆ ಹೆಚ್ಚು ಲಕ್ಷ್ಯಕೊಡಬೇಕು.

ಆದುದರಿಂದ ಸುಖವು ಎರಡು ಪ್ರಕಾರ. ಒಂದು ಸಂಸ್ಪರ್ಶಜ ಸುಖ ಮತ್ತೊಂದು ಸಂಸ್ಪರ್ಶರಹಿತ ಸುಖ.

ಈ ವಿಷಯಭೋಗಗಳನ್ನು ಬಿಟ್ಟು ತನ್ನೊಳಗೇ ತನ್ನಾತ್ಮನೊಳಗೇ ಪ್ರಾಪ್ತವಾಗುವ ಸುಖವು ಹೊರಗಿನ ಮತ್ತಾವ ಕಾರಣವನ್ನೂ ಅಪೇಕ್ಷೆಮಾಡದೆ ಇರುವುದರಿಂದ ಅದು "ಅಖಂಡ ಸುಖ". ವಿಷಯಗಳ ಸಂಬಂಧದಿಂದಾಗುವುದು 'ಖಂಡಸುಖ". ವಿಷಯವು ಸುಖದುಃಖಗಳೆರಡನ್ನೂ ಹುಟ್ಟಿಸುವುದು. ಆತ್ಮಸುಖವು ಯಾವ ವಿಧವಾದ ದುಃಖಕ್ಕೂ ಕಾರಣವಾಗದು. ಅಜ್ಞಾನಿಯು ವಿಷಯಭೋಗದಲ್ಲಿ ಸಿಕ್ಕಿಬೀಳುತ್ತಾನೆ. ಜ್ಞಾನಿಯು ಅಖಂಡಾತ್ಮನಲ್ಲಿ ದೊರೆಯುವ ಅಖಂಡ ಸುಖವನ್ನು ಅಖಂಡವಾಗಿ ಅನುಭವಿಸುತ್ತಾನೆ ಮತ್ತು ನಿಜಾನಂದದಲ್ಲಿ ಮತ್ತನಾಗಿರುತ್ತಾನೆ.

ವಿಷಯಗಳಿಂದ ಸಿಕ್ಕುವ ಸುಖದ ಮೂಲವನ್ನು ಹುಡುಕೋಣ. ರುಚಿರುಚಿಯಾದ ಆಹಾರಕ್ಕಾಗಿ ನಾಲಿಗೆಯು ಆಶೆಪಡುತ್ತದೆ. ಈ ಸುಖದ ಆಶೆಗಾಗಿ ನಾಲಿಗೆಯು ರುಚಿ-ರುಚಿಯಾದ ವಸ್ತುಗಳನ್ನು ತನಗೆ ಬೇಕಾದಷ್ಟು ಸಂಗ್ರಹಿಸಲು ಇಚ್ಛಿಸುತ್ತದೆ. ಈ ಪದಾರ್ಥ ಸಂಗ್ರಹಕ್ಕಾಗಿ ಮನಸ್ಸು ಅವುಗಳನ್ನು ಇತರರಿಂದ ತಪ್ಪಿಸಿ ತಾನು ಅನುಭವಿಸಬೇಕೆನ್ನುತ್ತದೆ. ಇತರರಿಗೂ ಅದೇ ಬೇಕಾಗಿರುವುದರಿಂದ ಪರಸ್ಪರ ದ್ವೇಷಬುದ್ಧಿಯು ಹೆಚ್ಚುತ್ತದೆ. ದ್ವೇಷದಿಂದ ಕಲಹ, ಅದರಿಂದ ವಿವಿಧವಾದ ದುಃಖಪರಂಪರೆಗಳು, ಪಾಪಸಂಗ್ರಹಗಳು. ಹೀಗೆ ಸ್ವಾರ್ಥವು ಪ್ರಾರಂಭವಾಗಿ ದುಃಖವು ಕೊನೆಯವರೆಗೂ ಇವನನ್ನು ಬೆನ್ನಟ್ಟುತ್ತದೆ. ಅವನ ಎಲ್ಲ ವಿಷಯಗಳೂ ಹೀಗೆಯೇ. ಆದುದರಿಂದ ಸಂಸ್ಪರ್ಶ ಸುಖವೆಲ್ಲಾ ದುಃಖದಿಂದ ಪ್ರಾರಂಭವಾಗುವುವು. ಅವು ತಾತ್ಕಾಲಿಕ ಸುಖವನ್ನು ಕೊಟ್ಟಂತೆ ಮಾತ್ರ ತೋರಿದರೂ

ಪರಿಣಾಮದಲ್ಲಿ ದುಃಖವನ್ನು ಕೊಡುವುವು ಆದುದರಿಂದ ಸಮಸ್ತ ಸಂಗ್ರಹಗಳನ್ನೂ ತ್ಯಜಿಸಿ, ವಿಷಯಭೋಗವನ್ನು ದೂರಮಾಡಿ ನಿರ್ಜನಸ್ಥಾನದಲ್ಲಿ ಏಕಾಂತವಾಸವನ್ನು ಮಾಡುತ್ತಾ, ಕಾಮ ಕ್ರೋಧ ರಹಿತನಾಗಿ ಬ್ರಹ್ಮಾತ್ಮಾನುಸಂಧಾನಮಾಡುವ "ಸಂನ್ಯಾಸ ಯೋಗಿಗೆ" ಬ್ರಹ್ಮನ ನಿರ್ವಾಣಪದವು ಲಭ್ಯವಾಗುವುದು

ಕರ್ಮಯೋಗದಲ್ಲಿ ವಿ ಷ ಯ ವಿ ಮು ಖ ನಾ ಗ ಬೇ ಕಾ ಗಿ ಲ್ಲ ಪ್ರಾರಬ್ಧವಶದಿಂದ ಬರುವ ಸುಖ ದುಃಖಗಳನ್ನೆಲ್ಲಾ ಈಶ್ವರನ ಪ್ರಸಾದವೆಂದು ತಿಳಿದು ದೇಹೇಂದ್ರಿಯ ಮನಸ್ಸುಗಳನ್ನು ಜಗದೀಶ್ವರನಾದ ಜನಾರ್ದನನ ಸೇವೆಗೆ ಹಾಕಿ, ಕರ್ಮಮಾಡುತ್ತಾ ಅವುಗಳ ಫಲಾಫಲಗಳ ಕಡೆಗೆ ಲಕ್ಷ್ಯಕೊಡದೆ ಕರ್ತವ್ಯರೂಪ ದಿಂದ ಕರ್ಮಮಾಡುವವನು, ಕರ್ಮಗಳನ್ನುಮಾಡುತ್ತಿದ್ದರೂ ಅವುಗಳ ಬಂಧನಕ್ಕೆ ಸಿಕ್ಕುವುದಿಲ್ಲ

ಆದುದರಿಂದ ಸರ್ವೇಶ್ವರನಾದ ಜಗದಾತ್ಮನನ್ನೇ–ಪರಮಾತ್ಮ ನನ್ನೇ ಸಮಸ್ತ ಯಜ್ಞ ತಪಸ್ಸುಗಳ ಫಲವನ್ನು ಅನುಭವ ಮಾಡುವವನೆಂದೂ, ಆತನೇ ದೇವಾಧಿದೇವನೆಂದೂ, ಜಗತ್ತಿನ ಪರಮಪವಿತ್ರನಾದ ಅವ್ಯಾಜಕರುಣಾಶಾಲಿಯೆಂದೂ ತಿಳಿದವನು ಸಹಜ ಶಾಂತಿರೂಪ ಮೋಕ್ಷವನ್ನು ಹೊಂದುತ್ತಾನೆ

---

# ಆತ್ಮಸಂಯಮಯೋಗ-ಅಭ್ಯಾಸಯೋಗ

ಇದು ಪ್ರಾರಂಭವಾಗುವ ಶ್ಲೋಕದಲ್ಲಿ ಕರ್ಮಫಲವನ್ನು ಆಶ್ರಯಿಸದೆ ಕರ್ತವ್ಯಕರ್ಮವನ್ನು ಮಾಡುವವನು ಸಂನ್ಯಾಸಿಯು ಮತ್ತು ಯೋಗಿಯು ಎಂಬ ಉಪದೇಶವಿದೆ ಕರ್ಮಯೋಗಿಗೂ ಕರ್ಮಸಂನ್ಯಾಸಿಗೂ ಅತ್ಯವಶ್ಯಕವಾದುದು ಸಂಕಲ್ಪತ್ಯಾಗವು. ಅದಿಲ್ಲದಿದ್ದರೆ ಎರಡೂ ಸಿದ್ಧಿಸವು ಎಂಬುದು ಎರಡನೇ ಶ್ಲೋಕದ ಉಪದೇಶವು.

ಮೂರನೆ ಶ್ಲೋಕದಲ್ಲಿ ಸಾಧಕಯೋಗಿಗೂ, ಸಿದ್ಧಯೋಗಿಗೂ ಇರುವ ಭೇದವನ್ನು ವಿವರಿಸಿ, ನಾಲ್ಕನೆಯದರಲ್ಲಿ ಸರ್ವಸಂಕಲ್ಪ ಸಂನ್ಯಾಸಿಯೇ ಯೋಗಾರೂಢನೆಂದೂ ಹೇಳಿದೆ ಐದು ಆರನೇ ಶ್ಲೋಕಗಳಲ್ಲಿ ಶತ್ರು ಮಿತ್ರಸ್ವರೂಪವನ್ನು ಗುರ್ತಿಸಿ, ೭-೮-೯ ರಲ್ಲಿ ಯೋಗಿಯ ಸ್ವರೂಪವನ್ನು ವಿವರಿಸಿದೆ ೧೦ ರಿಂದ ೨೬ ರ ವರೆಗೆ ಸಾಧನಾಕ್ರಮವನ್ನು ಸ್ಪಷ್ಟಪಡಿಸಿದೆ ೨೭ ರಿಂದ ೩೨ ರ ಪೂರ್ತಿ ಪುನಃ ಯೋಗಿಯ ಸ್ವರೂಪವನ್ನೇ ಹೇಳಿದೆ ೩೩ ರಿಂದ ೪೫ ರ ವರೆಗೆ ಚಂಚಲವಾದ ಮನಸ್ಸು ಯೋಗದಲ್ಲಿ ನಿಲ್ಲಲಾರ ದೆಂದೂ, ಅದನ್ನು ಅಭ್ಯಾಸ ವೈರಾಗ್ಯಗಳಿಂದ ಪಡೆಯಬೇಕೆಂದೂ ಕಷ್ಟಕರವಾದ ಯೋಗಸಾಧನೆಯಿಂದ ಜಾರಿದ ಯೋಗಭ್ರಷ್ಟ ನಾದವನಿಗೇನೂ ಭಯವಿಲ್ಲವೆಂದೂ, ಆತನಿಗೆ ಮರಣಾನಂತರ ಉತ್ತಮ ಲೋಕವು ಪ್ರಾಪ್ತಿಯಾಗಿ ಪುನಃ ಶುಚಿರ್ಭೂತರಾದ

ಶ್ರೀಮಂತರ ಮನೆಯಲ್ಲಾಗಲೀ, ಯೋಗಿಗಳ ವಂಶದಲ್ಲೇ ಆಗಲೀ ಜನ್ಮವು ಬಂದು ಹಿಂದಿನ ಸಂಸ್ಕಾರಗಳ ಬಲದಿಂದ ಅವನು ಸಾಧನೆ ಯಲ್ಲಿ ಮುಂದರಿಸಿ ಪರಮ ಗತಿಯನ್ನು ಹೊಂದುವನೆಂದೂ ಅರ್ಜುನ ಕೃಷ್ಣರ ಪ್ರಶ್ನೋತ್ತರಗಳಿಂದ ಸ್ಪಷ್ಟಪಡಿಸಿದೆ.

ಅಭ್ಯಾಸಪರವಾದ ವಿಷಯವನ್ನು ಬೋಧಿಸುವ ಶ್ಲೋಕಗಳು ೧೦ ರಿಂದ ೨೬ ರ ವರೆಗೆ ಮಾತ್ರ. ಪ್ರತಿಯೊಬ್ಬರೂ ಚಿತ್ತವೃತ್ತಿ ನಿಗ್ರಹಕ್ಕೆ ಅನುಸರಿಸಬೇಕಾದ ಆಸನ, ಪ್ರಾಣಾಯಾಮ, ಸಾಧನೆ ಗಳೇ ಇನ್ನೂ ಹೇಳಲ್ಪಡುವುವು. ಕರ್ಮಯೋಗಿಯು ತನ್ನ ನಿತ್ಯದ ಕೆಲವು ಕಾಲವನ್ನು ಈ ಅಭ್ಯಾಸಕ್ಕೆ ವಿನಿಯೋಗಿಸುವುದು ಅವಶ್ಯಕವೆಂದೂ ಇದರಿಂದ ಏಕಾಗ್ರತೆಹೊಂದಿ ಅಂತರ್ಮುಖವಾದ ಮನಶ್ಶಕ್ತಿಯು ಉಳಿದ ಕಾಲಗಳಲ್ಲಿ ನಡೆಸಲ್ಪಡುವ ಕರ್ತವ್ಯದ ಕರ್ಮಗಳಲ್ಲಿ ಅಸಂಗಭಾವವನ್ನು ವೃದ್ಧಿಮಾಡುವುದಕ್ಕೆ ಅತ್ಯಂತ ಸಹಕಾರಿಯಾಗುತ್ತದೆಂದೂ ಈ ಅಧ್ಯಾಯದಲ್ಲಿ ಸೂಚಿಸಲ್ಪಡು ವುದು.

ಯೋಗದ ಉದ್ದೇಶ್ಯವು ಚಿತ್ತವೃತ್ತಿ ನಿರೋಧವು. ಅದಕ್ಕಾಗಿ ಬೇಕಾದಷ್ಟು ಸಾಧನೆಗಳು ಯೋಗಶಾಸ್ತ್ರಗಳಲ್ಲಿ ಉಕ್ತವಾಗಿವೆ.. ಅವುಗಳನ್ನೆಲ್ಲಾ ಕರ್ಮಯೋಗಿಗೆ ಮಾಡಲು ಸಾಧ್ಯವಿಲ್ಲದಿದ್ದರೂ ಬಾಹ್ಯ ವ್ಯವಹಾರದಿಂದ ಚಾಂಚಲ್ಯ ಹೊಂದ ಬಹುದಾದ ಮನಸ್ಸನ್ನು ಬಲತ್ಕಾರವಾಗಿ ಅಂತರ್ಮುಖವಾಗಿ ಮಾಡುವುದಕ್ಕೆ ಇವರಲ್ಲಿನ ಅಭ್ಯಾಸವು ಅತ್ಯವಶ್ಯಕವೆಂದು ವಾಚಕ ರಿಗೆ ಸೂಚಿಸುವೆವು.

ಶ್ರೀ ಜ್ಞಾನೇಶ್ವರರು ಸ್ವತಃ ಯೋಗಿಗಳಾದುದರಿಂದ ಅವರು ಈ ೧೭ ಶ್ಲೋಕಗಳಲ್ಲಿ ಯೋಗಶಾಸ್ತ್ರವನ್ನು ತುಂಬಿಬಿಟ್ಟಿದ್ದಾರೆ.

ಅದು ಹಠಯೋಗವೂ ಅಲ್ಲ. ಸಾಮಾನ್ಯ ಅಷ್ಟಾಂಗಯೋಗವೂ ಅಲ್ಲ. ನಾಥಪಂಥೀಸನ್ನಿವೃತ್ತಿನಾಥರ ಉಪದೇಶಕ್ರಮದಂತೆ ಸಿದ್ಧ ವಾದ ಯೋಗವು ಅವರದು. ಆದುದರಿಂದ ಯೋಗದ ವಿಷಯ ದಲ್ಲಿ ಅವರ ಉಪದೇಶದ ಈ ಭಾವವನ್ನು ಶ್ಲೋಕಾರ್ಥದೊಳಗೆ ಜೋಡಿಸದೆ ಬೇರೆಯಾಗಿಯೇ ಕೊಡುವುದು ಉತ್ತಮವೆಂದು ಭಾವಿಸಿರುವೆವು. ಇದರಲ್ಲಿ ಮೂಲ ಶ್ಲೋಕಾರ್ಥಯುಕ್ತ ಅನುವಾದವನ್ನು ಸ್ವತಂತ್ರವಾಗಿಯೇ ಓದಿಕೊಳ್ಳಬಹುದಾಗಿದೆ. ಅಪೇಕ್ಷೆಪಟ್ಟವರು ಜ್ಞಾನೇಶ್ವರರ ಈ ಅಭ್ಯಾಸಯೋಗದ ಅನುವಾದವಲ್ಲಿ ೧೦ ರಿಂದ ೧೨ ನೇ ಶ್ಲೋಕ ಪೂರ್ತಿ ಯಾಗಿ ಬೇರೆಯಾಗಿಯೂ ಓದಿಕೊಳ್ಳಬಹುದು.

ಕೊನೆಯ ೪೬–೪೭ ಶ್ಲೋಕಗಳಲ್ಲಿ ಸಾಮಾನ್ಯ ತಪಸ್ಸು ಮಾಡುವವರಿಗಿಂತಲೂ, ಶಾಸ್ತ್ರಜ್ಞಾನವುಳ್ಳವರಿಗಿಂತಲೂ, ಸಕಾಮ ಕರ್ಮಮಾಡುವವರಿಗಿಂತಲೂ, ಯೋಗಿಯು ಸಂಕಲ್ಪತ್ಯಾಗಮಾಡಿ ಕರ್ಮಫಲಗಳನ್ನು ಸರ್ವವ್ಯಾಪಿಯಾದ ಅಖಂಡ ಪರಿಪೂರ್ಣ ಪರಮಾತ್ಮ ನಲ್ಲಿ ಸಮರ್ಪಿಸುವ ಯೋಗವು ಸರ್ವಶ್ರೇಷ್ಠವೆಂದೂ ಶ್ರೀಮಂತರ ಮನೆಯಲ್ಲಾಗಲೀ, ಯೋಗಿಗಳ ವಂಶದಲ್ಲಿಯೇ ಆಗಲೀ ಜನ್ಮ ಬಂದು ಹಿಂದಿನ ಸಂಸ್ಕಾರಗಳ ಬಲದಿಂದ ಸಾಧನೆಯನ್ನು ಮುಂದರಿಸಿ ಪರಮಗತಿಯನ್ನು ಹೊಂದುವನೆಂದೂ ಅರ್ಜುನನ ಪ್ರಶ್ನೋತ್ತರಗಳಿಂದ ಸ್ಪಷ್ಟಪಡಿಸಿದೆ.

ಅಭ್ಯಾಸಪರವಾದ ವಿಷಯವನ್ನು ಬೋಧಿಸುವ ಶ್ಲೋಕ ಗಳು ೧೦ ರಿಂದ ೨೬ ರ ವರೆಗೆ ಮಾತ್ರ. ಪ್ರತಿಯೊಬ್ಬರೂ ಚಿತ್ತವೃತ್ತಿ ನಿಗ್ರಹಕ್ಕೆ ಅನುಸರಿಸಬೇಕಾದ ಆಸನ, ಪ್ರಾಣಾಯಾಮ

ಸಾಧನೆಗಳೇ ಇಲ್ಲಿ ಹೇಳಲ್ಪಡುವುವು ಕರ್ಮಯೋಗಿಯು ತನ್ನ ನಿತ್ಯದ ಕೆಲವು ಕಾಲವನ್ನು ಈ ಅಭ್ಯಾಸಕ್ಕೆ ವಿನಿಯೋಗಿಸುವುದು ಅವಶ್ಯಕವೆಂದೂ ಇದರಿಂದ ಏಕಾಗ್ರತೆ ಹೊಂದಿ ಅಂತರ್ಮುಖ ವಾದ ಮನಶ್ಶಕ್ತಿಯು ಉಳಿದ ಕಾಲಗಳಲ್ಲಿ ನಡೆಸಲ್ಪಡುವ ಕರ್ತವ್ಯ ಕರ್ಮಗಳಲ್ಲಿ ಅಸಂಗ ಭಾವವನ್ನು ವೃದ್ಧಿಮಾಡುವುದಕ್ಕೆ ಅತ್ಯಂತ ಸಹಕಾರಿಯಾಗುವುದೆಂದೂ ಈ ಅಧ್ಯಾಯದಲ್ಲಿ ಸೂಚಿಸಲ್ಪಡುವುದು

ಯೋಗದ ಉದ್ದೇಶ್ಯವು ಚಿತ್ತವೃತ್ತಿನಿರೋಧವು ಅದಕ್ಕಾಗಿ ಬೇಕಾದಷ್ಟು ಸಾಧನೆಗಳು ಯೋಗಶಾಸ್ತ್ರಗಳಲ್ಲಿ ಉಕ್ತವಾಗಿವೆ ಅವುಗಳನ್ನೆಲ್ಲಾ ಕರ್ಮಯೋಗಿಗೆ ಮಾಡಲು ಸಾಧ್ಯವಿಲ್ಲದಿದ್ದರೂ ಬಾಹ್ಯವ್ಯವಹಾರದಿಂದ ಚಾಂಚಲ್ಯಹೊಂದಬಹುದಾದ ಮನಸ್ಸನ್ನು ಬಲಾತ್ಕಾರವಾಗಿ ಅಂತರ್ಮುಖವಾಗಿ ಮಾಡುವುದಕ್ಕೆ ಇದರಲ್ಲಿನ ಅಭ್ಯಾಸವು ಅತ್ಯವಶ್ಯಕವೆಂದು ವಾಚಕರಿಗೆ ಸೂಚಿಸುವೆವು

ಆದುದರಿಂದ ಶ್ರದ್ಧೆಯಿಂದ ಅಂತರಾತ್ಮನನ್ನು ಪರಮಾತ್ಮ ನಲ್ಲಿಯೇ ಏಕನಿಷ್ಠೆಯಿಂದ ನಿಲ್ಲಿಸಿ ಭಜನೆಮಾಡುವವನು ಸರ್ವ ಶ್ರೇಷ್ಠನೆಂದೂ ಆತನು ಪರಮಾತ್ಮನಿಗೆ ಅತ್ಯಂತ ಪ್ರಿಯನಾದುದ ರಿಂದ ಶೀಘ್ರವಾಗಿ ಪರಮ ಗತಿಯನ್ನು ಪಡೆಯುವನೆಂದೂ ಹೇಳುತ್ತಾ ಅಧ್ಯಾಯವು ಕೊನೆಗೊಳ್ಳುವುದು

---

# ಜ್ಞಾನ ವಿಜ್ಞಾನ ಯೋಗ

## ಅಖಂಡ ಉಪದೇಶ

ಇದುವರೆಗೂ ಹೇಳಿದ ಅಧ್ಯಾಯಗಳಲ್ಲಿ ಶ್ರೀ ಕೃಷ್ಣ ಪರಮಾತ್ಮನ ಉಪದೇಶದ ಮಧ್ಯೆ ಅಲ್ಲಲ್ಲಿ ಅರ್ಜುನನ ಪ್ರಶ್ನೆಗಳು ಬರುತ್ತಿದ್ದವು ಆದರೆ ಶ್ರೀ ಕೃಷ್ಣ ಪರಮಾತ್ಮನ ಅಖಂಡವಾದ ಧಾರಾಪ್ರವಾಹವಾದ ಉಪದೇಶವು ಈ ಅಧ್ಯಾಯದಿಂದ ಪ್ರಾರಂಭ ವಾಗುವುದು ಚಿತ್ತದ ವಿಕ್ಷೇಪವನ್ನುಂಟುಮಾಡುವ ಯಾವ ಪ್ರಶ್ನೆಯೂ ಮಧ್ಯದಲ್ಲಿಲ್ಲ ಇವರ ಹಿಂದಿನ ೫ ನೇ ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನ ಪ್ರಶ್ನೆಯು ಇದೆ ಅಲ್ಲಿಂದ ಮುಂದೆ ಕೊನೆಯವರೆಗೂ ಶ್ರೀ ಕೃಷ್ಣನ ಉತ್ತರವಿದೆ. ಅದು ಅರ್ಜುನನ ಪ್ರಶ್ನೆಗೆ ಸಮಾಧಾನ ಮಾತ್ರ ಸ್ವಯಂಸ್ಫೂರ್ತಿಯಿಂದ ಅಲ್ಲ ಆದರೆ ಈ ೭ ನೇ ಅಧ್ಯಾಯವು "ಈ ಭಕ್ತನು ಭ್ರಾಂತಚಿತ್ತನಾಗಿ ದ್ದಾನೆ ಆತನಿಗೆ ಸತ್ಯ ಜ್ಞಾನವನ್ನು ಕೊಡುವ ಅವಶ್ಯಕತೆಯು ಇದೆ" ಎಂದು ಭಾವಿಸಿ ಆತನ ಮೇಲೆ ಅನುಗ್ರಹವನ್ನು ಮಾಡುವುದಕ್ಕೋಸ್ಕರವಾಗಿಯೇ ಈಶ್ವರನ ಸಂಪೂರ್ಣ ಸ್ವರೂಪ ಜ್ಞಾನವನ್ನು ವಿಜ್ಞಾನ ಸಹಿತವಾಗಿ ಕೃಷ್ಣಪರಮಾತ್ಮನು ಹೇಳಿದ್ದಾನೆ ಇದನ್ನು ಸರಿಯಾಗಿ ತಿಳಿದ ನಂತರ

**ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥** (೭–೨)

"ಜಗತ್ತಿನಲ್ಲಿ ಹೆಚ್ಚಾಗಿ ತಿಳಿಯಬೇಕಾದುದು ಬೇರೆ ಏನೂ ಇರುವುದಿಲ್ಲ" ಇಂತಹ ಜ್ಞಾನವನ್ನು, ಕೇಳದೆ ಇದ್ದರೂ ಭಕ್ತನ

ಅನುಗ್ರಹಕ್ಕಾಗಿ ಉಪದೇಶಮಾಡಿದ್ದಾನೆ. ಇದೇ ಈ ಅಖಂಡ ಉಪದೇಶದ ಮಹತ್ತು. ಇದರಲ್ಲಿ ಪರಮೇಶ್ವರನ ಅಖಂಡ ಸ್ವರೂಪದ ಸಮಗ್ರ ಜ್ಞಾನವೂ ಇದೆ. ಆದುದರಿಂದ ಎಲ್ಲರೂ ಇದನ್ನು ಚೆನ್ನಾಗಿ ಮನನಮಾಡಬೇಕು. ಪರಮೇಶ್ವರನ ವಿಷಯವಾದ ಜ್ಞಾನವನ್ನು ಸಮಗ್ರವಾಗಿ ತಿಳಿಯುವುದು ಕಷ್ಟ. ಏಕೆಂದರೆ ಆತನು ಅನಂತ ಸ್ವರೂಪನು. ಮನುಷ್ಯನ ಬುದ್ಧಿಯು ಪರಿಮಿತವಾದುದು. ಅವರವರ ಬುದ್ಧಿಶಕ್ತಿಯ ಯೋಗ್ಯತೆಯನ್ನು ಅನುಸರಿಸಿ ಅರ್ಥ ಮಾಡಿಕೊಳ್ಳಬಹುದೇ ಹೊರ್ತು ವಾಙ್ಮನೋತೀತನಾದ ದೇವನ ಮಹಿಮೆಯನ್ನೆಂತು ಬುದ್ಧಿಯು ಗ್ರಹಿಸಬಲ್ಲದು ? ಮನುಷ್ಯನ ಪ್ರವೃತ್ತಿಯು ಸದಾ ಸಂಸಾರದಲ್ಲಿಯೇ ಇರುತ್ತದೆ, ಆದುದರಿಂದ ಸಾವಿರಕ್ಕೆ ಒಬ್ಬನು ದೇವನ ಸ್ವರೂಪವನ್ನು ತಿಳಿಯಲು ಯತ್ನಿಸುತ್ತಾನೆ. ಇಂತಹ ಸಹಸ್ರಾರು ಜನಗಳಲ್ಲಿ ಯಾವನೋ ಒಬ್ಬನಿಗೆ ಮಾತ್ರ ಯಥಾರ್ಥ ಜ್ಞಾನವಾಗುತ್ತದೆ. (೬-೩)

## ದಿವ್ಯದೃಷ್ಟಿ

ಇಂತಹ ಜ್ಞಾನವು ಬಲು ದುರ್ಲಭ. ಅದನ್ನು ಈ ಅಧ್ಯಾಯದಲ್ಲಿ ಅದಷ್ಟು ಸುಲಭವಾಗಿ ಉಪದೇಶಮಾಡಿದ್ದಾನೆ. ಪುರುಷನೊಡನೆ ಪ್ರಕೃತಿಯು ಇದೆ. ಇಲ್ಲಿ ಪ್ರಕೃತಿ ಎಂಬುದಕ್ಕೆ ಶರೀರ ದೇಹ ಅಥವಾ ತನು ಎಂದರ್ಥ. ಪುರುಷನೂ ಪ್ರಕೃತಿಯೂ ಬೇರೆ ಬೇರೆ ಎಂದು ಕೆಲವರು ತಿಳಿಯುತ್ತಾರೆ. ಒಂದು ಮತ್ತೊಂದರಿಂದ ಬೇರೆಯಾಗುವುದು ಸಾಧ್ಯವಿಲ್ಲ. ಜಡಪ್ರಕೃತಿಯು ಚೇತನಪುರುಷನಿಂದ ಸರ್ವಥಾ ಭಿನ್ನವಿದೆಯೆಂಬ ಭಾವವು ಕೇವಲ ಕಲ್ಪನೆ ಮಾತ್ರ. ವಸ್ತುತಃ ಈ ಜಗತ್ತಿನಲ್ಲಿ ಚೇತನಪುರುಷನನ್ನೂ

ಜಡಪ್ರಕೃತಿಯನ್ನೂ ಬೇರೆಬೇರೆ ಸೀಸೆಗಳಲ್ಲಿಟ್ಟಂತೆ ಮಾಡಲು ಸಾಧ್ಯವಿಲ್ಲ. ಹೀಗೆ ಬೇರೆಯಾದ ಸತ್ತೆಗಳು ಯಾರ ಅನುಭವದಲ್ಲಿಯೂ ಇಲ್ಲ. ಕೇವಲ ಕಲ್ಪನೆಯಿಂದ ಶಾಸ್ತ್ರಕಾರರು ಭೇದವನ್ನು ಗುರ್ತಿಸಿದ್ದಾರೆ. ಕಲ್ಲುಸಕ್ಕರೆಯ ಒಂದು ಹರಳು ಮತ್ತು ಅದರೊಳಗಿನ ಸಿಹಿ ಇವುಗಳು ಕಲ್ಪನೆಯಿಂದ ಭಿನ್ನವೇ ಹೊರತು ಸಿಹಿಯನ್ನೂ ಸಕ್ಕರೆಯನ್ನೂ ಬೇರೆ ಬೇರೆ ಮಾಡಲಾಗುವುದಿಲ್ಲ. ಹೀಗೆಯೇ ಪ್ರಕೃತಿಯೂ ಪುರುಷನೂ ಪರಸ್ಪರ ಭಿನ್ನವೆಂದು ತಿಳಿಯುವುದು ಕಲ್ಪನಾ ಮಾತ್ರವೇ ಸರಿ. ಹೀಗೆಯೇ (ಗೀತಾ ಅಧ್ಯಾಯ ೭ ಶ್ಲೋಕ ೮ ರಿಂದ ೧೧) ಜಲದಲ್ಲಿನ ರಸ, ಸೂರ್ಯನಲ್ಲಿನ ತೇಜಸ್ಸು, ಚಂದ್ರನಲ್ಲಿನ ಬೆಳದಿಂಗಳು, ಆಕಾಶದಲ್ಲಿನ ಶಬ್ದ, ಮನುಷ್ಯನಲ್ಲಿನ ಶೌರ್ಯ, ಪೃಥ್ವಿಯಲ್ಲಿನ ಗಂಧ, ಅಗ್ನಿಯಲ್ಲಿನ ಉಷ್ಣತೆ, ಪ್ರಾಣಿಗಳಲ್ಲಿನ ಜೀವನ, ತಪಸ್ವಿಗಳಲ್ಲಿನ ತಪಸ್ಸು, ಬುದ್ಧಿವಂತರೊಳಗಿನ ಬುದ್ಧಿ, ತೇಜಸ್ವಿಗಳ ತೇಜಸ್ಸು, ಬಲವಂತರಲ್ಲಿನ ಬಲ ಇವುಗಳು ಹೇಗೆ ಪರಸ್ಪರ ಭಿನ್ನವಲ್ಲವೋ ಹಾಗೆಯೇ ಜಗತ್ತಿನಲ್ಲಿ ಈಶ್ವರನು ಅಭಿನ್ನವಾಗಿದ್ದಾನೆ. ಹೀಗೆ ಈಶ್ವರ ಮತ್ತು ಪ್ರಕೃತಿಯ ಸಂಬಂಧವು ನಿತ್ಯವೆಂದು ಹೇಳಲ್ಪಟ್ಟಿದೆ. ಪೃಥ್ವಿಯಿಂದ ಗಂಧವನ್ನು ಬೇರೆಮಾಡಲಾಗುವುದಿಲ್ಲ. ಹೇಗೆ ಅಗ್ನಿಯಿಂದ ಉಷ್ಣತೆಯನ್ನು ಬೇರೆಮಾಡಲಾಗುವುದಿಲ್ಲವೋ ಹಾಗೆಯೇ ಪ್ರಕೃತಿಯಿಂದ ಪುರುಷನನ್ನು ಖಂಡಿತವಾಗಿಯೂ ಬೇರೆಮಾಡಲು ಸಾಧ್ಯವಿಲ್ಲ. ಈ ಉದಾಹರಣೆಯು ಬಹಳ ಬೋಧಪ್ರದವಾಗಿದೆ. ಜಡದಿಂದ ಚೇತನವನ್ನು ಎಂದಿಗೂ ಬೇರೆಮಾಡಲಾಗುವುದಿಲ್ಲ. ನಾವು ಈಗ ಗುರ್ತುಮಾಡುವ ಭೇದವು ಜಡ ಚೇತನಗಳಲ್ಲಿ ಕಲ್ಪನೆ ಮಾತ್ರ. ಸೂರ್ಯ ಮತ್ತು ಆತನ ತೇಜಸ್ಸುಗಳ ಕಲ್ಪನೆಯಲ್ಲಿ ಭೇದವಿದೆ.

ಆದರೆ ವಸ್ತುತಃ ಅವೆರಡೂ ಪರಸ್ಪರ ಭಿನ್ನವಿಲ್ಲ. ಆಕಾಶದಲ್ಲಿ ಮತ್ತು ಅದರಿಂದ ಹುಟ್ಟುವ ಶಬ್ದದಲ್ಲಿ ಕಾಣಬರುವ ಭೇದವು ಹೇಗೆ ಕಲ್ಪನಾಮಾತ್ರವೋ ಹಾಗೆಯೇ ವಸ್ತುತ್ವದ ದೃಷ್ಟಿಯಿಂದ ಅವೆರಡರಲ್ಲಿನ ಅಭೇದವೂ ಪ್ರತ್ಯಕ್ಷವೇ. ತಪಸ್ವಿಯಲ್ಲಿರುವ ತಪಸ್ಸೂ, ಬುದ್ಧಿವಂತನಲ್ಲಿರುವ ಬುದ್ಧಿಯೂ ಇವುಗಳಲ್ಲಿ ನಮ್ಮ ಕಲ್ಪನೆಯು ಭೇದವನ್ನು ಗುರ್ತಿಸಿದರೂ ಈ ಪದಾರ್ಥಗಳನ್ನು ಬೇರೆಬೇರೆಯಾಗಿ ಮಾಡಲು ಪ್ರಯತ್ನಪಡುವಾಗ ಖಂಡಿತ ಅಭಿನ್ನ ವೆಂದು ನಿಃಸಂದೇಹವಾಗಿ ಗೊತ್ತಾಗುತ್ತದೆ. ಹೀಗೆಯೇ ಮಾಲೆಯ ಉದಾಹರಣೆಯನ್ನು ನೋಡಿ. **(ಸೂತ್ರೇಮಣಿ ಗಣಾ ಇವ ೭–೭)** ಇಲ್ಲಿ ಸೂತ್ರವು ಬೇರೆ; ಅದರೊಳಗಿನ ಮಣಿಗಳು ಬೇರೆ. ಆದರೆ ಸೂತ್ರವೂ ಮಣಿಯೂ ಪರಸ್ಪರ ಜೊತೆಯಾಗಿ ಸೇರಿದಲ್ಲದೆ ಅದು ಮಾಲೆಯಾಗುವುದಿಲ್ಲ. ಹೀಗೆಯೇ ಪ್ರಕೃತಿ (ಮಣಿ) ಪುರುಷ (ಸೂತ್ರ) ಇವೆರಡೂ ಯಾವುದರಲ್ಲಿ ಲಯ ವಾಗುತ್ತದೆಯೋ ಅದು ಪರಮಾತ್ಮ (ಮಾಲೆ) ಆಗಿದೆ. ವಸ್ತುತಃ ಈ ಮೂರೂ ಕಲ್ಪನೆ ಮಾತ್ರವೇ. ಎಲ್ಲಕ್ಕೂ ಅಧಾರವಾದ ಸದ್ವಸ್ತುವು ಒಂದಿದೆ. ಜಡ ಮತ್ತು ಚೇತನ ಎಂಬುದು ಕಲ್ಪನೆ ಮಾತ್ರ. ಸದ್ವಸ್ತುವು ಒಂದೇ. ಅದಕ್ಕೆ ಗಾಡಿಯ ಎರಡು ಕಡೆಯೂ ಚಕ್ರಗಳಿರುವಂತೆ ಪ್ರಕೃತಿ ಪುರುಷರು–ಜಡ ಚೇತನಗಳು ಕಾಣ ಬರುತ್ತವೆ. ಒಂದು ಕಡೆಯಿಂದ ನೋಡಿದಾಗ ಜಡವಸ್ತುವು ಕಾಣಬಂದರೆ ಮತ್ತೊಂದುಕಡೆಯಿಂದ ನೋಡಲು ಚೇತನವು ಗೋಚರವಾಗುತ್ತದೆ. ಈ ಎರಡು ರೂಪಗಳೂ ಸೇರಿ ಒಂದೇ ಸದ್ವಸ್ತು (ಪರಮಾತ್ಮ) ಆಗಿದೆ. **(ಏಕಂಸತ್ ವಿಪ್ರಾ ಬಹುಧಾ ವದಂತಿ । ಋ ೧–೧೬೪–೪೬)** ವಸ್ತುವು ಒಂದೇ. ಅದನ್ನು ಅನೇಕ ಪ್ರಕಾರವಾಗಿ ವರ್ಣನೆ ಮಾಡುತ್ತಾರೆ.

# ಈಶ್ವರನ ಪ್ರಕೃತಿ

**ಭೂಮಿರಾಪೋನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥**
**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥**

(ಭ ಗೀ ಅ ೭ ಶ್ಲೋ ೪-೫)

ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ ಎಂಬ ಈ ಎಂಟು ರೂಪವಾಗಿರುವುದು ಅಪರಾಪ್ರಕೃತಿ ಅಥವಾ ಪ್ರಕೃತಿಯ ನಿಕೃಷ್ಟಭಾಗ. ಇದರೊಳಗಿದ್ದು ಇದಕ್ಕೆ ಆಧಾರವಾಗಿ, ಜೀವರೂಪವಾಗಿ ಇದನ್ನು ಧಾರಣೆ ಮಾಡಿರುವುದು ಪರಾಪ್ರಕೃತಿ ಅಥವಾ ಪ್ರಕೃತಿಯ ಶ್ರೇಷ್ಠವಾದ ಭಾಗ. ಈ ಎರಡೂ ಸೇರಿ ಈಶ್ವರನ ಪ್ರಕೃತಿಯು ಒಂಭತ್ತು ವಿಧವಾಗಿದೆ. ಪ್ರಕೃತಿಯೆಂದರೆ ದೇಹವು. ಯಾವುದರಲ್ಲಿ ಜಡವೂ ಚೇತನವೂ ಸೇರಿದೆಯೋ ಅದು ಪರಮೇಶ್ವರನ ಶರೀರವಾಗಿದೆ. ಮಣಿಗಳ ಸ್ಥಾನದಲ್ಲಿ ಪೃಥಿವ್ಯಾದಿಪದಾರ್ಥಗಳಿವೆ. ಸೂತ್ರದ ಸ್ಥಾನದಲ್ಲಿ ಜೀವನು-ಸೂತ್ರಾತ್ಮನು-ಸೂತ್ರದಂತೆ ಸರ್ವವ್ಯಾಪಿ ಯಾಗಿರುವ ಆತ್ಮನು ಇದ್ದಾನೆ. ಮಾಲೆಯ ಸ್ಥಾನದಲ್ಲಿ ಪರಮಾತ್ಮ, ಪರಮೇಶ್ವರ, ನಾರಾಯಣ ಎಂದು ಮುಂತಾಗಿ ಹೇಳಲ್ಪಡುವ ಅದ್ವಿತೀಯವಾದ ವಸ್ತುವಿದೆ.

ಪರಮಾತ್ಮನು ಬೇರೆಬೇರೆಯಾಗಿ ಕಾಣುವ ಪಾಂಚಭೌತಿಕ ವಸ್ತುಗಳ ತೋರುವಿಕೆಯಿಂದ ಭಿನ್ನನಂತೆ ತೋರಿದರೂ ಆತನು ಅಖಂಡ-ಅಖಂಡಿತ. ಅದು ಸಾಮಾನ್ಯದೃಷ್ಟಿಯವರಿಗೆ ತಿಳಿಯ

ಬರುವುದಿಲ್ಲ ಪರಮಾತ್ಮನ ಅಖಂಡ ಸ್ವರೂಪದ ಅನುಭವವು ದಿವ್ಯದೃಷ್ಟಿಯಿಂದ ಮಾತ್ರ ಕಾಣಬರುತ್ತದೆ

## ದಿವ್ಯದೃಷ್ಟಿ ಎಂದರೇನು

ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿ ದಿವ್ಯ ದೃಷ್ಟಿಯ ವಿಷಯವು ಬಂದಿದೆ **"ದಿವ್ಯಂ ದದಾಮಿ ತೇ ಚಕ್ಷುಃ"** ನಿನಗೆ ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ ಎಂದು ಹೇಳಲ್ಪಟ್ಟಿದೆ. ಅರ್ಜುನನಿಗೆ ಆಗ ಕೊಡಲ್ಪಟ್ಟದ್ದು ದಿವ್ಯಚಕ್ಷುಸ್ಸು ಅದರಿಂದ ಆವನಿಗೆ ಕಂಡ ನೋಟವು-ಅದರಿಂದ ಅವನು ತಿಳಿದುಕೊಂಡ ಪರಮಾತ್ಮನ ಮಹಿಮೆಯು ಹನ್ನೊಂದನೆಯ ಅಧ್ಯಾಯದ ತುಂಬ ವರ್ಣಿಸಲ್ಪಟ್ಟಿದೆ. ಅದು ಶ್ರೀ ಕೃಷ್ಣಪರಮಾತ್ಮನ ವಿಶೇಷ ಅನುಗ್ರಹ. ಹಾಗೆಯೇ ಗುರ್ವನುಗ್ರಹವಿಲ್ಲದಿದ್ದರ ಉಪದೇಶದ ಯಥಾರ್ಥ ರಹಸ್ಯವನ್ನು ತಿಳಿಯಲಾಗುವುದಿಲ್ಲ ದೃಷ್ಟಿಯು ದಿವ್ಯವಾಗುವುದಿಲ್ಲ

ಗೀತೆಯಲ್ಲಿ ಅನೇಕ ಸ್ಥಳಗಳಲ್ಲಿ ದಿವ್ಯಜ್ಞಾನವು ಹೇಳಲ್ಪಟ್ಟಿವ ಅವುಗಳಲ್ಲಿ ಗೀತಾ ಅಧ್ಯಾಯ ಎಂಟು ಶ್ಲೋಕ ನಾಲ್ಕರಿಂದ ಹನ್ನೊಂದರ ವೂರ್ತಿ ಹೇಳಲ್ಪಟ್ಟ ಉಪದೇಶ ಮಹತ್ವದ್ದು ದಿವ್ಯದೃಷ್ಟಿ, ದಿವ್ಯಚಕ್ಷುಸ್ಸು, ದಿವ್ಯಜ್ಞಾನ, ತೃತೀಯ ನೇತ್ರ ಎಂಬ ಮುಂತಾದ ಹೆಸರುಗಳು ಈ ಜ್ಞಾನವನ್ನು ಕುರಿತು ಹೇಳುವುವು ಎಂದೂ ಇದಲ್ಲದೆ ಉಳಿದ ಜ್ಞಾ ನ ವೆ ಲ್ಲಾ ವಿಪರೀತ ಜ್ಞಾನವು ಎಂದೂ ತಿಳಿಯಬೇಕು

ವಿವಿಧ ರೂಪವಾಗಿ ಭಿನ್ನಭಿನ್ನವಾಗಿ ಕಾಣುವ ಈ ಜಗತ್ತಿನಲ್ಲಿ ಒಂದು ಅಭೇದ ವಸ್ತುವನ್ನು ಗುರ್ತುಮಾಡುವುದು ಹೇಗೆ ? ಎಂಬ

ಸಂಶಯವು ಸಹಜವಾಗಿ ಹುಟ್ಟಬಹುದು. ಇದರ ಉತ್ತರಕ್ಕಾಗಿ ಪಂಚಮಹಾ ಭೂತಗಳು ಎಲ್ಲಿರುವುವು ಎಲ್ಲಿ ಇಲ್ಲ ಎಂಬುದನ್ನು ಸ್ವಲ್ಪ ವಿಚಾರಮಾಡೋಣ. ನಮ್ಮ ಮೂಗಿನಿಂದ ಗಂಧವನ್ನು ಗ್ರಹಣ ಮಾಡುತ್ತೇವೆ. ಆಗ ಗಂಧದಿಂದ ಪೃಥ್ವೀತತ್ತ್ವವು ಗುರ್ತಿಸಲ್ಪಡುತ್ತದೆ. ಈ ಪೃಥ್ವಿಯಲ್ಲಿ ಎಲ್ಲೆಲ್ಲಿಯೂ ಯಾವುದೋ ಒಂದು ತರಹವಾದ ಗಂಧವಿದ್ದೇ ಇದೆ. ಯಾವ ವಿಧವಾದ ಗಂಧವೂ ಇಲ್ಲದಿರುವ ಸ್ಥಳವೇ ಇಲ್ಲ. ರಸನೆಯಿಂದ-ನಾಲಿಗೆಯಿಂದ ರಸವನ್ನು ಗ್ರಹಣ ಮಾಡುತ್ತೇವೆ. ಜಗತ್ತಿನಲ್ಲಿ ಎಲ್ಲಲ್ಲಿಯೂ, ಎಲ್ಲ ವಸ್ತುಗಳಲ್ಲಿಯೂ ಯಾವುದೋ ಒಂದು ವಿಧವಾದ ರಸವು ಇದ್ದೇ ಇದೆ ಎಂಬುದು ವಿಚಾರದಿಂದ ಅನುಭವಕ್ಕೆ ಬರುತ್ತದೆ. ರೂಪದ ವಿಷಯವೂ ಹಾಗೆಯೇ. ಕಣ್ಣಿನಿಂದ ರೂಪವನ್ನು ಗ್ರಹಣಮಾಡುತ್ತೇವೆ. ಎಲ್ಲೆಲ್ಲಿ ಕಣ್ಣಿನ ದೃಷ್ಟಿಯು ಹಾಯುವುದೋ ಅಲ್ಲಲ್ಲಾ ಒಂದಲ್ಲ ಒಂದು ವಿಧವಾದ ರೂಪವಿದ್ದೇ ಇದೆ. ಹೀಗೆಂದು ಹೇಳುವಾಗ ಒಂದು ರೂಪದಿಂದ ಮತ್ತೊಂದು ರೂಪದ ಮಧ್ಯೆ ಏನೂ ಇರುವುದಿಲ್ಲ ವೆಂದು ಒಮ್ಮೆ ಯಾರಾದರೂ ಹೇಳಬಹುದಾದರೂ, ಆ ಎರಡು ರೂಪಗಳ ಮಧ್ಯೆ ಕಾಣಬರುವುದು ಒಂದು ವಿಧವಾದ ರೂಪವೇ ಎಂಬುದು ವಿಚಾರದೃಷ್ಟಿಯಿಂದ ನಿರ್ಣಯವಾಗುವುದು. ಒಂದು ಅಣುವಿನಿಂದ ಮತ್ತೊಂದು ಸೂಕ್ಷ್ಮಾತಿಸೂಕ್ಷ್ಮ ಅಣುವಿನ ಮಧ್ಯೆಯೂ ಕಾಣಬರುವ ಅವಕಾಶ-ಆಕಾಶವೂ ಒಂದು ವಿಧವಾದ ರೂಪವೇ ಎಂಬುದೂ, ರೂಪವಿಲ್ಲದಿರುವ ಸ್ಥಳವು ಸೂಜಿಯ ಮೊನೆಯಷ್ಟೂ ಸಿಕ್ಕಲಾರದೆಂಬುದೂ ಸಿದ್ಧಾಂತವೇ ಸರಿ. ಹೀಗೆಯೇ ವ್ಯಾಪಕತತ್ತ್ವವಾದ ಆಕಾಶವು ಜಗತ್ತಿನ ತುಂಬ ಇದ್ದೇ ಇದೆ. ಕಿವಿಯಿಂದ ಕೇಳಲ್ಪಡುವ ಶಬ್ದವೆಲ್ಲಾ ವ್ಯಾಪಕತತ್ತ್ವವಾದ

ಆಕಾಶವೇ ಚರ್ಮದಿಂದ ಸ್ಪರ್ಶವನ್ನು ಗುರ್ತಿಸುತ್ತೇವೆ. ಜಗತ್ತಿನ ತುಂಬ ಸ್ಪರ್ಶದ ಅನುಭವವು ಆಗದಿರುವ ಸ್ಥಳವೇ ಇಲ್ಲ ಎಂಬುದು ಅನುಭವಕ್ಕೆ ಬರುತ್ತದೆಯಲ್ಲವೆ ? ಆದುದರಿಂದ ಸರ್ವತ್ರ ಅಖಂಡ ಸ್ಪರ್ಶವೇ ತುಂಬಿಹೋಗಿದೆ ಎಂದು ತಿಳಿಯಬೇಕು

ಪಂಚಮಹಾಭೂತಗಳು ಹೀಗೆ ಎಲ್ಲೆಲ್ಲಿಯೂ ವ್ಯಾಪಕ ವಾಗಿದ್ದರೂ ಅವುಗಳು ಬೇರೆಬೇರೆಯಾಗಿವೆಯೇ ಅಥವಾ ಈ ಎಲ್ಲವನ್ನೂ ಧಾರಣೆಮಾಡಿರುವ ತತ್ತ್ವವಿಶೇಷದಲ್ಲಿ ಅಖಂಡವಾಗಿ ನಿಂತಿರುವುವೇ ಎಂಬ ಸಂಶಯವು ಹುಟ್ಟಬಹುದು ಅದಕ್ಕೆ ಉತ್ತರವಾಗಿ ಒಂದು ಉದಾಹರಣೆಯನ್ನು ಕೊಡುತ್ತೇವೆ

ಐದು ಜನ ಕುರುಡರು ಆನೆಯು ಹೇಗಿದೆ ಎಂಬುದನ್ನು ಗುರ್ತಿಸಲು ಹೊರಟರು ಒಬ್ಬನಿಗೆ ಕಂಬದಂತಿರುವ ಕಾಲು ಸಿಕ್ಕಿತು. ಅದನ್ನು ಹಿಡಿದು ತಡವಿ ಪರೀಕ್ಷಿಸಿದಾಗ ಅದು ಕಂಬದಂತೆ ಇದೆ ಎಂದು ತಿಳಿದನು ಮತ್ತೊಬ್ಬನು ಸೊಂಡಿಲಿನ ಹತ್ತಿರ ಹೋಗಿ ಅದನ್ನು ತಡವಿದನು ಅದು ಹಾವಿನಂತೆ ಅವನಿಗೆ ಭಾಸವಾಯಿತು ಮತ್ತೊಬ್ಬನು ಕಿವಿಯ ಹತ್ತಿರ ಹೋದನು ಅವನಿಗೆ ಅದು ಒಂದು ಮೊರದಂತೆ ಕಾಣಿಸಿತು ಮತ್ತೊಬ್ಬನು ಹೊಟ್ಟೆಯನ್ನು ತಡವಿದನು ಅವನಿಗೆ ಅದೊಂದು ಹತ್ತಿಯ ಭಾರೀ ಮೂಟೆಯಂತೆ ತೋರಿತು ಕೊನೆಯವನು ಬಾಲವನ್ನು ಹಿಡಿದನು. ಅದು ಕಸಬರಿಕೆಯಂತೆ ಅನುಭವ ವಾಯಿತು. ಆನೆಯು ಕಂಬದಂತೆ ಇದೆ ಎಂದು ಒಬ್ಬನು ಹೇಳಿದರೆ ಮತ್ತೊಬ್ಬನು ಮೊರದಂತೆ ಎಂದೂ ಮಗದೊಬ್ಬನು ಕಸಬರಿಕೆ ಯಂತೆ ಎಂದೂ, ಹೀಗೆ ಪರಸ್ಪರ ವಾದಮಾಡಲಾರಂಭಿಸಿದರು.

ಇವರ ವ್ಯಾಜ್ಯವು ಬಗೆಹರಿಯುವುದೆಂದು ? ಎಲ್ಲರು ಹೇಳುವುದೂ ಸತ್ಯವೇ. ಎಲ್ಲರ ಅನುಭವವೂ ಸತ್ಯವೇ. ಆದರೆ ಈ ಅನುಭವ ಗಳು ಏಕದೇಶೀಯ-ಅಪೂರ್ಣ. ಎರಡು ಕಣ್ಣುಗಳೂ ಚೆನ್ನಾಗಿ ಕಾಣಿಸಿದರೆ, ಆನೆಯ ದೇಹವನ್ನೆಲ್ಲಾ ಚೆನ್ನಾಗಿ ನೋಡಿದರೆ, ಅದರ ಸಂಪೂರ್ಣ ಸ್ವರೂಪವು ಮನದಟ್ಟಾಗುವುದು. ಇತರರು ಹೇಳುವುದೆಲ್ಲಾ ಅವರವರ ದೃಷ್ಟಿಯಿಂದ ಸತ್ಯವಾಗಿ ತೋರಿದರೂ ಆ ಅನುಭವಗಳು ಅಪೂರ್ಣವಾದುವುಗಳೆಂದು ಗೊತ್ತಾಗುವುದು. ಜಗತ್ತನ್ನು ಇಂದ್ರಿಯಗಳ ಮೂಲಕ ನೋಡಿದಾಗ ವಿವಿಧ ಭೇದಮಯವಾಗಿ ಖಂಡಖಂಡವಾಗಿ ಕಂಡರೂ, ದಿವ್ಯದೃಷ್ಟಿಯಿಂದ ನೋಡಿದವನಿಗೆ ಜಗದ್ವ್ಯಾಪಿಯಾಗಿರುವ ಅಖಂಡ ವಸ್ತುವು ಒಂದೇ ಎಂದೂ ಶಬ್ದ, ಸ್ಪರ್ಶ, ರೂಪ, ರಸ, ಗಂಧ ರೂಪ ಪಂಚಮಹಾ ಭೂತಗಳೂ ಜಗದ್ವ್ಯಾಪಿಗಳಾಗಿ ಆ ಅಖಂಡಪರಿಪೂರ್ಣ ಪರಮಾತ್ಮವಸ್ತುವನ್ನು ಆಚ್ಛಾದಿಸಿ ತೋರುತ್ತಿರುವುವೆಂದೂ ಅನುಭವವಾಗುವುದು. ಆದರೆ ಇಂದ್ರಿಯಗಳು ಪಂಚಮಹಾಭೂತ ಗಳನ್ನು ಬೇರೆಬೇರೆ ಎಂದೇ ಗುರ್ತಿಸುವುವು. ಏಕತ್ವದ ಅನುಭವ ಮಾಡಲಾರವು. ಇಂದ್ರಿಯಗಳನ್ನು ದಾಟಿ ಮನಸ್ಸನ್ನು ವಿಚಾರಿಸಿ ದರೆ ಅದು ಹೇಳುವುದೇನು ? ಇಂದ್ರಿಯಗಳಂತೆ ಅದು ಐದು ಪದಾರ್ಥಗಳನ್ನು ಗುರ್ತುಮಾಡುವುದಿಲ್ಲ. ಸತ್ವ-ರಜಸ್ಸು-ತಮಸ್ಸು ಎಂಬ ಮೂರು ಅನುಭವಗಳು ಅದಕ್ಕೆ ಪ್ರತ್ಯಕ್ಷವಾಗುವುವು. ಜಗತ್ತಿನಲ್ಲಿರುವುದನ್ನೆಲ್ಲಾ ಮನಸ್ಸು ತನ್ನ ಮಾನದಂಡದಿಂದ ಅಳೆಯುವಾಗ ಅದಕ್ಕೆ ಕೆಲವುವಸ್ತುಗಳು ಸುಖವನ್ನು ಕೊಡುವು ವಾಗಿಯೂ, ಕೆಲವು ದುಃಖವನ್ನು ಕೊಡುವುವಾಗಿಯೂ ಮತ್ತೆ ಕೆಲವು ಮಿಶ್ರಫಲವನ್ನು ಕೊಡುವುವಾಗಿಯೂ ತೋರುವುವು.

ಸುಖವನ್ನು ಕೊಡುವುದು **ಸಾತ್ವಿಕ**; ದುಃಖವನ್ನು ಕೊಡುವುದು **ತಾಮಸ**; ಮಿಶ್ರಫಲಗಳನ್ನು ಕೊಡುವುದು **ರಾಜಸ.**

ಈ ಸತ್ವ, ರಜಸ್ಸು, ತಮಸ್ಸುಗಳ ಸ್ವರೂಪವನ್ನು ಅನೇಕರು ಅನೇಕವಿಧವಾಗಿ ಶಾಸ್ತ್ರಗಳಲ್ಲಿ ವರ್ಣಿಸಿದ್ದಾರೆ:—

| ಸತ್ವ | ರಜಸ್ಸು | ತಮಸ್ಸು |
|---|---|---|
| ಸುಖ | ಸುಖದುಃಖಮಿಶ್ರ | ದುಃಖ |
| ಜ್ಞಾನ | ಕರ್ಮ | ಅಜ್ಞಾನ |
| ಸುರ | ಸುರಾಸುರ | ಅಸುರ |
| ಮಧುರಾನ್ನ | ತೀಕ್ಷ್ಣಾನ್ನ | ಗತರಸಾನ್ನ |
| ಪವಿತ್ರ | ಮೇಧ್ಯಾಮೇಧ್ಯ | ಅಪವಿತ್ರ |
| ಅನಾಸಕ್ತಿ | ಫಲಾಸಕ್ತಿ | ಅಶ್ರದ್ಧೆ |

ಈ ರೀತಿಯಲ್ಲಿ ಮನಸ್ಸಿನಿಂದ ಮನನಮಾಡಿದಾಗ, ಸಂಪೂರ್ಣ ಜಗತ್ತು ಈ ಮೂರು ವಿಧವಾಗಿ ಕಾಣುವುದು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಲ್ಲಿಯೂ ಮನಸ್ಸು ಮೂರು ಅನುಭವ ಗಳನ್ನು ನೋಡುವುದು. ಸುಖವನ್ನು ಕೊಡುವ ಶಬ್ದ, ದುಃಖವನ್ನು ಕೊಡುವ ಶಬ್ದ, ಸುಖದುಃಖಗಳ ಮಿಶ್ರಫಲವನ್ನು ಕೊಡುವ ಶಬ್ದ ಹೀಗೆ ಅನುಭವಮಾಡುತ್ತಾ ಪ್ರತಿಯೊಂದನ್ನೂ ಮೂರು ಮೂರಾಗಿಯೇ ನೋಡುತ್ತಿರುವುದು.

ಇಂದ್ರಿಯಗಳು ಐದನ್ನು ತೋರಿಸಿ ಮನಸ್ಸು ಮೂರನ್ನು ಗುರ್ತುಮಾಡಿದಾಗ ಈ ಮೂರು ಗುಣಗಳ ಹಿಂದೆ ಮೂರು ಪದಾರ್ಥಗಳಿವೆಯೇ ಅಥವಾ ಒಂದೇ ಪದಾರ್ಥವಲ್ಲಿಯೇ ಈ ಮೂರು ಅನುಭವಗಳು ತೋರುತ್ತವೆಯೋ? ತಪ್ಪದೊಡನೆ

ಸಕ್ಕರೆಯು ಉಪಯೋಗಮಾಡಲ್ಪಟ್ಟಾಗ ಸಾತ್ವಿಕ. ನೀರಿನೊಡನೆ ಉಪಯೋಗಿಸಲ್ಪಟ್ಟಾಗ ರಾಜಸ. ಹಾಗೆಯೇ ತೆಗೆದುಕೊಂಡಾಗ ತಾಮಸ ಎಂಬಂತೆ ಒಂದೇ ಪದಾರ್ಥವೇ ಮೂರು ಅನುಪಾನ ಗಳ ಮೂಲಕ ಮೂರು ಬೇರೆಬೇರೆ ರೂಪಗಳಿಂದ ಅನುಭವ ವನ್ನು ಕೊಡುವಂತೆ ಇರುವುದೆಂಬುದನ್ನು ಮನಸ್ಸಿನ ಹಿಂದಿರುವ ಬುದ್ಧಿಯ ಮೂಲಕ ವಿಚಾರಮಾಡಲೆತ್ನಿಸಿದಾಗ ಜಡ ಚೇತನ ರೂಪಗಳಾದ ಎರಡು ಅನುಭವಗಳು ತೋರುವುವಲ್ಲವೇ ?

| ಜಡ | ಚೇತನ |
|---|---|
| ಪ್ರಕೃತಿ | ಪುರುಷ |
| ಸಾಕಾರ | ನಿರಾಕಾರ |
| ರಯೀ | ಪ್ರಾಣ |
| ಮೂರ್ತ | ಅಮೂರ್ತ |
| ಸ್ಥೂಲ | ಸೂಕ್ಷ್ಮ |
| ಅಚೇತನ | ಸಚೇತನ |
| ಅಪರಾಪ್ರಕೃತಿ | ಪರಾಪ್ರಕೃತಿ |
| ಪ್ರಕೃತಿ | ಜೀವ |
| ಕ್ಷರ | ಅಕ್ಷರ |
| ವ್ಯಯ | ಅವ್ಯಯ |
| ವ್ಯಕ್ತಿ | ಅವ್ಯಕ್ತಿ |

ಹೀಗೆ ಬುದ್ಧಿಯು ವಿಶ್ವವನ್ನು ನೋಡಿದಾಗ ಜಗತ್ತಿನಲ್ಲೆಲ್ಲಾ ಅದು ಹೋಗಿ ಸುತ್ತಿಬಂದಾಗ ತೋರುವ ಅನುಭವವು ಜಡ, ಚೇತನ ಎಂಬ ಎರಡು ರೂಪಗಳು ಮಾತ್ರ. ಈ ಎರಡೂ

ಒಂದೇ ಅನುಭವದ ಎರಡು ಮುಖಗಳೋ ಅಥವಾ ಒಂದೇ ಎರಡಾಗಿ ತೋರುವುದೋ ? ಇಂದ್ರಿಯಗಳಿಗೆ ಐದಾಗಿ, ಮನಸ್ಸಿಗೆ ಮೂರಾಗಿ, ಬುದ್ಧಿಗೆ ಎರಡಾಗಿ ತೋರಿದುದು ಐದೋ ಮೂರೋ ಅಥವಾ ಎರಡೋ ಎಂಬುದನ್ನು ಬುದ್ಧಿಯು ನಿರ್ಣಯಿಸಲಾರದು.

ಬುದ್ಧಿಯ ಹಿಂದಿರುವುದು ಆತ್ಮ-ಅಹಂಕಾರ (ಅಹಂ+ಕಾರ) ನಾನು ಎಂಬ ಅನುಭವ ಅದು ಜಗತ್ತಿನಲ್ಲೆಲ್ಲಾ ಹರಡಿಕೊಂಡಿದೆ ಅದಿಲ್ಲದ ಸ್ಥಳವಿಲ್ಲ ಜಗತ್ತಿನ ಪ್ರತಿಯೊಂದು ಪದಾರ್ಥವೂ "ನಾನು" "ನಾನು" ಎನ್ನುತ್ತಿದೆ "ನಾನು" ಇಲ್ಲದೆ ಜಗತ್ತೇ ಇಲ್ಲ ನಾನು ಎಚ್ಚರವಾಗಿದ್ದರೆ ಜಗತ್ತು ಕಾಣುತ್ತದೆ ನಾನು ಮಲಗಿದರೆ—ನಿದ್ರಿಸಿದರೆ ಜಗತ್ತೂ ಮಲಗುವುದು, ನಿದ್ರಿಸುವುದು ಅಥವಾ ನನ್ನಲ್ಲಿ ಲಯವಾಗುವುದು ನಾನು ಜ್ಞಾತಾ-ತಿಳಿಯುವವನು ಜಗತ್ತು ಜ್ಞೇಯ-ತಿಳಿಯಲ್ಪಡುವುದು ನಾನು ಇಲ್ಲದಿದ್ದರೆ ಜಗತ್ತು ಎಂಬುದು ಎಲ್ಲಿದೆ ? ಇಲ್ಲವೇ ಇಲ್ಲ ಆದುದರಿಂದ ನಾನೇ ಎಲ್ಲೆಲ್ಲಿಯೂ ಎಲ್ಲ ಕಡೆಗಳಲ್ಲಿಯೂ ಹರಡಿಕೊಂಡಿದ್ದೇನೆ—ವ್ಯಾಪಿಸಿಕೊಂಡಿದ್ದೇನೆ ಎಂದು ಬುದ್ಧಿಗಿಂತಲೂ ಮೇಲಾಗಿರುವ ಅದರ ಆತ್ಮವು ಹೇಳುವುದು

ಆದುದರಿಂದ ನಾನು ಎಂಬುದು ಎಲ್ಲೆಲ್ಲಿಯೂ ಇದೆ ಅದು ಆತ್ಮ ಇಂದ್ರಿಯಗಳಿಗೆ ಐದು ರೂಪವಾಗಿ, ಮನಸ್ಸಿಗೆ ಮೂರಾಗಿ, ಬುದ್ಧಿಗೆ ಎರಡಾಗಿ ತೋರುವುದು ಒಂದೇ ಅದು ವಿಶ್ವದಲ್ಲಿ ಎಲ್ಲೆಲ್ಲಿಯೂ ತುಂಬಿಕೊಂಡಿದೆ ಎಂಬುದೀಗ ಗೊತ್ತಾಗುತ್ತದೆಯಲ್ಲವೆ ?

ಈ ಆತ್ಮ ಅಥವಾ ನಾನು ಎಂಬುದಕ್ಕೆ ಎರಡು ಮುಖ. ಅದನ್ನು ಒಂದು ಕಡೆಯಿಂದ ನೋಡಿದರ ಕ್ಷರಭಾವವು (ನಾಶ

ವಾಗುವ ಪಾಂಚ ಭೌತಿಕ ಗುಣತ್ರಯ ರೂಪ ಜಡಭಾವವು) ಕಾಣುವುದು. ಮತ್ತೊಂದು ಕಡೆಯಿಂದ ನೋಡಿದರೆ ಅಕ್ಷರ ಭಾವವು (ಕ್ಷರಕ್ಕೆ ಜೀವಭೂತವಾಗಿ ಅದರೊಳಗೆ ಕಾಣುವ ಚೇತನ ಭಾವವು) ತೋರುವುದು. ಆ ವಸ್ತುವು ಕ್ಷರಾಕ್ಷರ ಭಾವದಿಂದ ತೋರುವುದರಿಂದ ಅದು ಕೇವಲ ಕ್ಷರವೂ ಅಲ್ಲ, ಕೇವಲ ಅಕ್ಷರವೂ ಅಲ್ಲ. ಅಕ್ಷರಭಾವಕ್ಕಿಂತಲೂ ಶ್ರೇಷ್ಠವಾದ ಮತ್ತೊಂದು ಎಂಬುದು ಅನುಭವಕ್ಕೆ ಬರುವುದು.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**
**ಯಸ್ಮಾತ್ಕ್ಷರಮತೀತೋಽಹ ಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇಚ ಪ್ರಥಿತಃ ಪುರುಷೋತ್ತಮಃ॥೧೮॥**

(ಭ. ಗೀ. ಅ. ೧೫)

ಈ ಲೋಕದಲ್ಲಿ ಕ್ಷರ ಅಕ್ಷರ ಎಂಬ ಎರಡು ಪುರುಷ ರಿದ್ದಾರೆ. ಸಮಸ್ತ ಭೂತಗಳೂ ಕ್ಷರನು. ಅವುಗಳಿಗೆ ಅಂತರ್ಯಾಮಿಯಾಗಿರುವವನು ಅಕ್ಷರನು. ಈ ಎರಡಕ್ಕಿಂತ ಉತ್ತಮನಾಗಿರುವವನು ಪರಮಾತ್ಮನು. ಅವನು ಲೋಕತ್ರಯ ವನ್ನು ಧಾರಣೆಮಾಡಿ ರಕ್ಷಿಸುವ ಪರಮೇಶ್ವರನು. ಏಕೆಂದರೆ ಆತನು ಕ್ಷರನಿಗಿಂತಲೂ ಮೇಲಿದ್ದಾನೆ. ಅಕ್ಷರನಿಗಿಂತಲೂ ಉತ್ತಮನಾಗಿದ್ದಾನೆ. ಆದುದರಿಂದ ಲೋಕಗಳಲ್ಲಿಯೂ ವೇದ ಗಳಲ್ಲಿಯೂ ಪುರುಷೋತ್ತಮನೆಂದು ಹೇಳಲ್ಪಟ್ಟು ಪ್ರಸಿದ್ಧಿಯನ್ನು ಹೊಂದಿದ್ದಾನೆ.

ಇಲ್ಲಿ ಪುರುಷನು ಮೂರಲ್ಲ, ಎರಡಲ್ಲ, ಒಂದೇ ಶರೀರ ಭಾವದಿಂದ ಕ್ಷರನು, ಜೀವಭಾವದಿಂದ ಅಕ್ಷರನು. ಆವನು ಕ್ಷರನೂ ಅಹುದು. ಅಕ್ಷರನೂ ಅಹುದು ಈ ಕ್ಷರಾಕ್ಷರ ಭಾವ ಗಳನ್ನು ಮೀರಿದುದು ಅವನ ಸ್ವ ರೂ ಪ ಅದು ಪುರುಷೋತ್ತಮ.

ಶರೀರಭಾವದಿಂದಿರುವ ಕ್ಷರನು, ಜೀವಭಾವದಿಂದ ತೋರುವ ಅಕ್ಷರನು ಈ ಇಬ್ಬರೂ ಮನುಷ್ಯರೂಪದಲ್ಲಿ ಸೇರಿದ್ದಾರೆ. ಈ ಎರಡೂ ಸೇರಿದವನು–ಕ್ಷರಾಕ್ಷರ ಭಾವಕ್ಕೆ ವಿಲಕ್ಷಣವಾದ ವನು ಪುರುಷೋತ್ತಮ ಕ್ಷರನೂ ಅಕ್ಷರನೂ ಪುರುಷೋತ್ತಮನೂ ಬೇರ ಬೇರೆ ಅಲ್ಲ ಈ ಮೂರೂ ಎರಡು ಚಕ್ರಗಳೂ ಸೇರಿ ಗಾಡಿಯಾಗುವಂತೆ ಒಂದೇ ಪುರುಷನಲ್ಲಿ ಕಲ್ಪನೆಯಿಂದ ಕಾಣ ಬರುವ ಭೇದಗಳು ಮಾತ್ರ.

ಇದನ್ನು ಸ್ಪಷ್ಟವಾಗಿ ತಿಳಿಸಲು ಮಾವಿನ ಹಣ್ಣಿನ ಉದಾಹರಣೆಯು ಸಾಕು ಅದರ ಸ್ಥೂಲ ಆಕಾರವು ಕ್ಷರಭಾವ ವಾದರೆ ಅದರೊಳಗಿನ ಸಿಹಿಯು ಅಕ್ಷರಭಾವವು. ಹಣ್ಣನ್ನು ತುಂಡು ತುಂಡುಮಾಡಿ ಕತ್ತರಿಸಿದರ ಪ್ರ ತಿ ಯೊ ೦ ದು ತುಂಡಿ ನಲ್ಲಿಯೂ ಸಿಹಿಯು ತುಂಬಿಕೊಂಡಿರುವುದು ಅದು ಹೊರಗೆ ಕಾಣುವುದಿಲ್ಲ ತಿಂದರೆ ಮಾತ್ರ ಅನುಭವವಾಗುವುದು. ಈ ಕ್ಷರಾಕ್ಷರಗಳೆರಡನ್ನೂ ಮೀರಿದುದು–"ಮಾವಿನಹಣ್ಣು" ಎಂದು ಹೇಳಲ್ಪಡುವುದು ಪುರುಷೋತ್ತಮ ಭಾವವು ಅಥವಾ ಸಂಪೂರ್ಣ ವಾದ ಹಣ್ಣು, ಸಿಪ್ಪೆ, ತಿರಳು, ಓಟೆ, ಸಿಹಿ ಮುಂತಾದುವು ಗಳೆಲ್ಲಾ ಸೇರಿ ಹಣ್ಣು ಎಂದು ಕರೆಯಲ್ಪಡುವುದು ಪುರುಷೋತ್ತಮ. ಈ ಮೂರೂ ಕಲ್ಪನೆಯ ಭೇದಗಳು ಮಾತ್ರ.

**ಇದೇ ದಿವ್ಯದೃಷ್ಟಿ. ಇದನ್ನು ದಿವ್ಯಚಕ್ಷುಸ್ಸು ಎಂದು ಕರೆಯಬೇಕು** ಇದರಿಂದ ಅನೇಕ ಪರಸ್ಪರ ಭಿನ್ನವಾಗಿ ಕಾಣುವ ವಸ್ತುಗಳೆಲ್ಲಾ ಒಂದೇ ತತ್ತ್ವದಲ್ಲಿ ಹೇಗೆ ಲೀನವಾಗುತ್ತವೆ ಎಂಬುದರ ಅರಿವಾಗುತ್ತದೆ ಅರ್ಜುನನಿಗೆ ಮುಂಚೆ ಈ ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥವೂ ಒಂದು ಮತ್ತೊಂದರಿಂದ ಬೇರೆ ಯಾಗಿಯೇ ಕಾಣುತ್ತಿತ್ತು ಆ ಅಜ್ಞಾನದಿಂದ "ನಾನು ಕೊಲ್ಲು ವವನು ಶತ್ರುಗಳು ಕೊಲ್ಲಿಸಿಕೊಳ್ಳುವವರು" ಎಂಬ ಭ್ರಾಂತಿಯಿಂದ ಅವನಿಗೆ ಶೋಕ ಮೋಹಗಳುಂಟಾದವು ಈ ಭ್ರಮೆಯನ್ನು ನಿವಾರಣೆಮಾಡುವುದಕ್ಕಾಗಿಯೇ ಶ್ರೀ ಕೃಷ್ಣ ಪರಮಾತ್ಮನು ಅರ್ಜುನ ನಿಗೆ ದಿವ್ಯದೃಷ್ಟಿಯ ಉಪದೇಶಮಾಡಿದನು (ಗೀ ಅ ೭ ಶ್ಲೋ ೪-೧೨) ಈ ಜಗತ್ತಿರುವುದಾದರೂ ತುಂಡು ತುಂಡಾಗಿಲ್ಲ ಒಂದೇ ಅಖಂಡ ಏಕರಸವಾದ ಒಂದೇ ತತ್ತ್ವವು ಜಗತ್ತಿನಲ್ಲಿ ನಿರಂಕುಶಾಧಿಪತ್ಯ ಮಾಡುತ್ತಿರುವುದು ಎಂದು ತೋರಿಸಿಕೊಟ್ಟನು ಇದನ್ನು ಅರ್ಜುನನು ಮನಸ್ಸಿನಲ್ಲಿ ಬುದ್ಧಿಯ ಸಹಾಯದಿಂದ ವಿಚಾರ ವಿಮರ್ಶೆಮಾಡಿದಾಗ ಶ್ರೀ ಕೃಷ್ಣಪರಮಾತ್ಮನು ಹೇಳಿ ದಂತೆ ನಡೆಯುವನು ಆದುದರಿಂದ ನಾವೂ ಸಹ ಅರ್ಜುನನ ಹಿಂದೆ ಹಿಂದೆಯೇ ಹೋಗಿ ಅವನ ಅನುಭವವನ್ನು ಅನುಸರಿಸ ಬೇಕಾಗುತ್ತದೆ.

## ಆತ್ಮನಿಂದ ಗುಣತ್ರಯದ ಉತ್ಪತ್ತಿ

ಆತ್ಮನಿಂದ ಸಾತ್ವಿಕಭಾವವು ಮಾತ್ರ ಹುಟ್ಟಿತೆಂದು ಸಾಮಾನ್ಯವಾಗಿ ಭಾವಿಸುತ್ತಾರೆ. ಆದರೆ ತಾಮಸಭಾವವೂ ಸಹ ಆತ್ಮನಿಂದಲೇ ಹುಟ್ಟಿರುವುದೆಂದವರು ಭಾವಿಸುವುದಿಲ್ಲ. ಈ

ಶಂಕೆಯನ್ನು ನಿವೃತ್ತಿಮಾಡುವುದಕ್ಕಾಗಿ ಭಗವಾನ್ ಶ್ರೀ ಕೃಷ್ಣನು ಹೇಳುತ್ತಾನೆ—

**ಯೇ ಚೈವ ಸಾತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನತ್ವಹಂ ತೇಷು ತೇ ಮಯಿ ॥** (೭–೧೨)

ಸಾತ್ವಿಕ ರಾಜಸ ತಾಮಸಭಾವಗಳು ನನ್ನಿಂದಲೇ ಹುಟ್ಟಿದವು ಗಳೆಂದು ತಿಳಿ. ಆದರೆ ಅವುಗಳಲ್ಲಿ ನಾನಿಲ್ಲ. ನನ್ನಲ್ಲಿ ಅವುಗಳು ಇವೆ."

ಅಖಂಡ ಏಕರಸವಾದ ಪರಮಾತ್ಮವಸ್ತುವು ಒಂದೇ ಜಗತ್ತಿನಲ್ಲಿ ಅಧಿಕಾರಮಾಡುತ್ತಿರುವಾಗ ತಾಮಸಭಾವವನ್ನು ಹುಟ್ಟಿಸುವ ಮತ್ತೊಂದು ಶಕ್ತಿಯು ಎಲ್ಲಿಂದ ಬರಬೇಕು !

ಎಲ್ಲವೂ ಇದೇ ಬ್ರಹ್ಮನಿಂದಲೇ ಅಥವಾ ಆತ್ಮನಿಂದಲೇ ಆಗುತ್ತದೆ ಎಂಬುದನ್ನು ಭಗವದ್ಗೀತೆಯಲ್ಲಿ ಪರಮಾತ್ಮನು "ಅಹಂ" ಶಬ್ದದಿಂದ ಹೇಳುತ್ತಾನೆ. ಅದನ್ನು ವೇದವೂ ಸಮರ್ಥಿಸುತ್ತದೆ.

| ಭಗವದ್ಗೀತಾ | ಅಥರ್ವವೇದ |
|---|---|
| **ಬುದ್ಧಿರ್ಬುದ್ಧಿಮತಾಮಸ್ಮಿ** (ಅ. ೭ ಶ್ಲೋ ೧೦) | **ಮೇಧಾ ಅಸ್ಮಿನ್ನಧ್ಯೈಹತ್** (ಅ. ೧೨-೨-೧೭) |
| **ಬಲಂಬಲವತಾಮಸ್ಮಿ** (೭–೧೧) | **ಬಲಂ ಅಸ್ಮೈಪ್ರಾಯಚ್ಛತ್** (೧೦-೧-೧೫) |
| **ನಾಸ್ತಿಕಾ ರಾಜಸಾಸ್ತಾಮಸಾಶ್ಚ ಭಾವಮತ್ತ ಏವ** (೭– ೨) | **ಆನಂದ ಉಗ್ರತಂದ್ರ್ಯಃ** (೧೪-೭೯) |

ಹೀಗೆ ವೇದವಾಕ್ಯಗಳೇ ಭಗವದ್ಗೀತೆಯ ಮೂಲಕ ಪ್ರತಿಬಿಂಬಿತಗಳಾಗಿವೆ ಎಂಬುದನ್ನು ಗುರ್ತಿಸಬಹುದು.

* ಆನಂದ-ದುಃಖ. ಉನ್ನತಿ-ಅವನತಿ, ಪ್ರಿಯ-ಅಪ್ರಿಯ, ಅಮೃತ-ಮೃತ್ಯು, ಸಮೃದ್ಧಿ-ದಾರಿದ್ರ್ಯ, ಮತಿ-ಅಮತಿ ಮುಂತಾದ ಭಾವಗಳೆಲ್ಲಾ ಮನುಷ್ಯನ ಅಂತಃಕರಣದಲ್ಲಿ ವಾಸಮಾಡುತ್ತಿರುವ ಬ್ರಹ್ಮನಿಂದಲೇ ಉತ್ಪನ್ನವಾಗುವುವು. ಈ ಭಾವಗಳು ಪರಸ್ಪರ ವಿರುದ್ಧಗಳಾದರೂ ಅವುಗಳ ಕಾರಣವು ಒಂದೇ ಹೊರತು ಅನೇಕ ಗಳಲ್ಲ. ಪರಸ್ಪರ ವಿರುದ್ಧಗಳಾದರೂ ಎಚ್ಚರ ನಿದ್ರೆಗಳು ಒಬ್ಬನೇ ಆತ್ಮನಿಂದಲೇ ಆಗುವಂತೆ ಈ ಎಲ್ಲ ಭಾವಗಳೂ ಒಬ್ಬ ಆತ್ಮ ನಿಂದಲೇ ಎಂದು ತಿಳಿಯಬೇಕು. ಆದುದರಿಂದಲೇ ವೇದಶಾಸ್ತ್ರದ ಅನುವಾದವಾದ ಭಗವದ್ಗೀತೆಯಲ್ಲಿ **"ಸಾತ್ವಿಕ, ರಾಜಸ, ತಾಮಸ"** ಎಂಬ ಭಾವಗಳೂ ಆತ್ಮನಿಂದಲೇ ಹುಟ್ಟುವುವು ಎಂದು ಹೇಳಲ್ಪಟ್ಟಿದೆ. ಆದರೆ ಇವುಗಳ ಉತ್ಪತ್ತಿಯ ನಂತರ ಅವುಗಳೊಳಗೆ ಯಾವನು ಸಿಕ್ಕಿಬೀಳುತ್ತಾನೆಯೋ ಅವನಿಗೆ ಇವು ಖಂಡಿತವಾಗಿಯೂ ಬಾಧೆಮಾಡುವುವು.

ಒಂದೇ ಶರೀರದಲ್ಲಿ ಒಂದೇ ವೀರ್ಯಬಿಂದುವಿನಿಂದ ಉತ್ಪನ್ನ ವಾದ ಶರೀರದಲ್ಲಿ ಸಪ್ತ ಧಾತುಗಳು ಹೇಗೆ ಉತ್ಪನ್ನವಾಗುವುವೋ ಒಂದೇ ಕಾರಣದಿಂದ ವಿವಿಧವಸ್ತುಗಳ ಉತ್ಪತ್ತಿಯಾದರೂ ಅವುಗಳ ಧರ್ಮಗಳು ಬೇರೆ ಬೇರೆಯಾಗಿರುವ ಕಾರಣದಿಂದ ಮನುಷ್ಯನು ಅವೆಲ್ಲವುಗಳ ಅಧೀನನಾಗಿಯೇ ಬಾಳಬೇಕಾಗುತ್ತದೆ.

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥**

(೭-೧೩)

---

* ಅಥರ್ವವೇದ (೧೦—೨)

"ಸತ್ವ-ರಜಸ್ತಮೋಗುಣಗಳಿಂದ ಮೋಹಿತನಾದ ಈ ಜಗತ್ತು ತ್ರಿಗುಣಗಳನ್ನು ಮೀರಿ ನಿಂತಿರುವ ನನ್ನನ್ನು–ನನ್ನ ಮಹಿಮೆಯನ್ನು ಸರಿಯಾಗಿ ತಿಳಿಯಲಾರದು" ಜಗತ್ತಿನ ಪ್ರವೃತ್ತಿಯು ಹೊರ್ಹೊರಗೇ-ನೋಡುವುದು ಹಿಂದಿರುಗಿ-ನೋಡುವ ಶಕ್ತಿಯು ಅದಕ್ಕಿಲ್ಲ ಮನುಷ್ಯನ ಶರೀರದಲ್ಲಿರುವ ಕೂದಲು ಉಗುರುಗಳು ಅಚೇತನವಾಗಿವೆ ಉಳಿದ ದೇಹವೆಲ್ಲಾ ಸಚೇತನವಾಗಿಯೇ ಇದೆ ಆದರೆ ಈ ಎರಡಕ್ಕೆ ಮೂಲಕಾರಣವು-ಒಂದೆ ಎಂಬುದನ್ನು ಮನುಷ್ಯನು- ತಿಳಿಯಲಾರನು ಇದು ಅಜ್ಞಾನಜನ್ಯವಾದ ಸ್ಥೂಲದೃಷ್ಟಿ. ಸ್ಥೂಲದೃಷ್ಟಿಯ ಮನುಷ್ಯನು ಸ್ಥೂಲವನ್ನೇ ನೋಡುವನು; ಹಿಂದಿರುಗಿ - ಸೂಕ್ಷ್ಮವನ್ನು ನೋಡಲಾರನು ಪರಮಾತ್ಮನ ಉಪಾಸನೆಯನ್ನೇನುಮಾಡಬಲ್ಲನು? ಎಂಬ ಸಂಶಯ ವನ್ನು -ನಿವಾರಣೆಮಾಡುವುದಕ್ಕಾಗಿ ಭಕ್ತರನ್ನು ನಾಲ್ಕು ವಿಭಾಗ ಮಾಡುತ್ತಾರೆ—

## ಚತುರ್ವಿಧ ಭಕ್ತರು

**ಚತುರ್ವಿಧಾ ಭಜನ್ತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥**
(೭–೧೬)

— ಭಕ್ತರು ನಾಲ್ಕು ವಿಧ ದುಃಖ ಸಂಕಟಗಳಿಂದ ಪೀಡಿತನಾಗಿ ಭಗವಂತನಿಗೆ ಮೊರೆಯಿಡುವವನು ಆರ್ತ ಭೋಗಪ್ರಾಪ್ತಿಗಾಗಿ ದೇವನನ್ನು ಬೇಡುವವನು ಅರ್ಥಾರ್ಥಿ ತತ್ತ್ವಾನುಸಂಧಾನ ಕ್ಕಾಗಿ–ಮನಶ್ಶಾಂತಿಗಾಗಿ ಭಗವದಾರಾಧನೆ ಮಾಡುವವನು ಜಿಜ್ಞಾಸು ಕೊನೆಯವನು ಜ್ಞಾನಿ ಜ್ಞಾನಿಯು-ಮೋಕ್ಷಮುಕ್ತ

ನಾಪ ಸೂರ್ಯನಂತೆ ಸಮಸ್ತ ದುಃಖ ಸಂಕಟಗಳಿಂದಲೂ, ತಾಪಸಂಕಟಾದಿಗಳಿಂದಲೂ ಮುಕ್ತನಾಗಿ ಸದಾ ಸರ್ವದಾ ಸಹಜ ಶಾಂತಿಯಿಂದಿರುವನು.

ದುಃಖ ಸಂಕಟಗಳು ಹಿಂಗಟ್ಟು ಮುರಿಕಟ್ಟಿದಾಗ ಕಷ್ಟ ನಿವಾರಣೆಗಾಗಿ ಈಶ್ವರನನ್ನು ಮೊರೆಹೊಗುವುದು ಮನುಷ್ಯನ ಸಹಜಸ್ವಭಾವ ಶರೀರವು ಸುದೃಢವಾಗಿ, ರೋಗರುಜಿನಗಳಿಲ್ಲದೆ ಇದ್ದರೆ ಬೇಕಾದಷ್ಟು ಧನವಿದ್ದರೆ, ಮನೆಯಲ್ಲಿ ಯಥೇಚ್ಛವಾಗಿ ಸುಖ ಶಾಂತಿಗಳಿದ್ದರೆ ಪರಮೇಶ್ವರನ ಜ್ಞಾಪಕವೇ ಬರುವುದಿಲ್ಲ ಒಂದರಮೇಲೊಂದು ದುಃಖಗಳು, ತೊಂದರೆಗಳು ಬರಲಾರಂಭಿಸಿ ದರೆ, ತನಗೆ ಆಸರೆಯಂತಿದ್ದ ಪತ್ನೀ, ಪುತ್ರರುಗಳು ಒಬ್ಬೊಬ್ಬ ರಾಗಿ ಕೈಬಿಡಲಾರಂಭಿಸಿದರೆ ಸಾಲ ಸೋಲಗಳು ಹಿಂಗಟ್ಟು ಮುರಿಗಟ್ಟುತ್ತಿದ್ದರೆ ಈ ಕಷ್ಟಪರಂಪರೆಗಳನ್ನು ತಡೆಯಲಾರದೆ ವೃಷ್ಟಿಯು ಪರಮಾತ್ಮನಕಡೆಗೆ ತಿರುಗುವುದು ದುಃಖವು ಇಮ್ಮಡಿಸಿದರೆ ಮುಂದೇನು ಗತಿಯೆಂದು ತಿಳಿಯಲಾರದೆ ಪರಮಾತ್ಮ ನಿಗೆ ಮೊರೆಯಿಡುವನು, ಈ ಸ್ಥಿತಿಯಲ್ಲಿರುವವನು ಆರ್ತಭಕ್ತ ಬಹುತೇಕ ಅನೇಕ ಮಂದಿ ಭಕ್ತರು ಈ ಗುಂಪಿನವರು ಎರಡನೆಯ-ಗುಂಪಿನವರು ಅರ್ಥಾರ್ಥಿಗಳು ಜಗತ್ತಿನ ಭೋಗ ಭಾಗ್ಯಗಳಿಗಾಗಿ ದೇವನನ್ನು ಉಪಾಸನೆಮಾಡುವರು ವ್ರತ, ತೀರ್ಥ, ಯಾತ್ರೆ, ಜಪ, ಅನುಷ್ಠಾನಗಳೆಲ್ಲಾ ಸುಖಭೋಗಾರ್ಥ ವಾಗಿಯೇ- ಈ ಜನ್ಮದಲ್ಲಿಲ್ಲದಿದ್ದರೆ- ಮುಂದಿನ ಜನ್ಮದಲ್ಲಾದರೂ ಅವುಗಳು ಪ್ರಾಪ್ತವಾಗಬೇಕೆಂದು ಆಶೆಪಡುವರು ಮೂರನೆಯವನು ಜಿಜ್ಞಾಸು ತತ್ತ್ವಾನುಸಂಧಾನಕ್ಕಾಗಿ ಅಥವಾ ಮನಸ್ಸಿನ ಸಮಾಧಾನಕ್ಕಾಗಿ ಈಶ್ವರೋಪಾಸನೆಮಾಡುವ ಸಾಧಕನು

ನಾಲ್ಕನೆಯವನು ಜ್ಞಾನಿ. ಜ್ಞಾನಿಗೆ ಜಗತ್ತೆಲ್ಲವೂ ಈಶ್ವರಸ್ವರೂಪವಾಗಿಯೇ ತೋರುತ್ತಿರುವುದು. ಯಾವುದು ವಿಭಕ್ತ ವಾಗುವುದಿಲ್ಲವೋ ಅದು ಅವಿಭಕ್ತ. "ವಾಸುದೇವಃ ಸರ್ವಂ" ಎಲ್ಲವು ವಾಸುದೇವನೇ ಎನ್ನುವ ಭಾವವು ಅವನಲ್ಲಿ ದೃಢವಟ್ಟಿರುವುದು. ಜಡ ಚೇತನಗಳೆಲ್ಲಾ ಆತನಿಗೆ ವಾಸುದೇವನೇ. ಯಾರು ಪರಮೇಶ್ವರನ ರೂಪದಲ್ಲಿ ಅಭಿನ್ನತೆಯಿಂದ ಸೇರಿಹೋಗಿರುವನೋ ಅವನು ಅನನ್ಯ ಭಕ್ತನು. ಇಂತಹ ಮಹಾತ್ಮನು ಬಲು ದುರ್ಲಭ ಎಂದು ಪರಮಾತ್ಮನೇ ಹೇಳುತ್ತಾನೆ. ಈ ಸ್ಥಿತಿಯು ಪ್ರಾಪ್ತವಾಗುವವರೆಗೆ ಆ ಆತ್ಮನು ಅಲ್ಪನಾಗಿರುತ್ತಾನೆ. ನಾನು ಬೇರೆ, ಜಗದೀಶನು ಬೇರೆ ಎಂದೇ ತಿಳಿಯುತ್ತಾನೆ. ಆದರೆ ಈ ಆತ್ಮನು ವಿಶಾಲನಾಗಿ ತನ್ನನ್ನು ಸೇರಿಕೊಂಡು ಜಗತ್ತೆಲ್ಲವೂ **ಈಶ್ವರನೇ** ಎಂಬ ಭಾವವು ಉದಯವಾದನಂತರ ಅದೇ ಆತ್ಮನು ಮಹತ್ತಾಗಿ ಮಹತ್ತಿನಲ್ಲಿ ಲೀನವಾಗುತ್ತಾನೆ.

ಜಗತ್ತಿನಲ್ಲಿರುವುದೆಲ್ಲವೂ, ಎಲ್ಲ ರೂಪಗಳೂ ಪುರುಷೋತ್ತಮನ ರೂಪಗಳೇ. ಆದುದರಿಂದ ಯಾರು ಯಾವ ರೀತಿ ಯಾವ ದೇವತೆಯನ್ನು ಉಪಾಸನೆಮಾಡಿದರೂ ಅದಕ್ಕೆ ಫಲವಿದ್ದೇ ಇದೆ. ರಾಜಸೇವಕನ ಅನುಗ್ರಹವನ್ನು ಸಂಪಾದಿಸಿದರೆ ಅವನ ಯೋಗ್ಯತೆಗೆ ತಕ್ಕ ಅನುಕೂಲವನ್ನು ಕೊಡಬಲ್ಲನು. ಮಂತ್ರಿಯನ್ನು ಆಶ್ರಯಿಸಿದರೆ ಅವನ ಶಕ್ತಿಯನ್ನನುಸರಿಸಿ ಫಲ ವಾಗುವುದು. ರಾಜನನ್ನು ಅನುಸರಿಸಿ ಆತನ ಅನುಗ್ರಹವನ್ನು ಪಡೆದರೆ ರಾಜನ ಅಧಿಕಾರದಲ್ಲಿರುವುದೆಲ್ಲಾ ಬರಬಲ್ಲುದು. ಆದುದರಿಂದ ಅನ್ಯದೇವತಾ ಉಪಾಸನೆಯನ್ನು ಬಿಟ್ಟು ಅಖಂಡ ಪರಿಪೂರ್ಣ ಪರಮಾತ್ಮನನ್ನೇ–ಪುರುಷೋತ್ತಮನನ್ನೇ ಶರಣು

ಹೋಗುವುದು ವಿವೇಕ. ನಮ್ಮ ಭಾವನೆಯು ಏಕದೇಶೀಯ ಶಕ್ತಿಯಕಡೆಗೆ ತಿರುಗಿದರೆ ನಮಗೆ ಆಗುವ ಫಲವು ಏಕದೇಶೀಯವೇ.

ಈ ಪುರುಷೋತ್ತಮನ ಸ್ವರೂಪವೇನು ? ಆತನ ಸರ್ವಾಂಗೋಪಾಸನೆಯನ್ನು ಹೇಗೆ ಮಾಡಬೇಕು ? ಎಂಬ ವಿಚಾರವೆಲ್ಲಾ ಹನ್ನೊಂದನೆಯ ಅಧ್ಯಾಯದ ವಿಚಾರವಿಮರ್ಶೆಯಲ್ಲಿ ಬರುವುದು. ಆದರೂ ಒಟ್ಟಿನಲ್ಲಿ ತಿಳಿಯಬೇಕಾದುದು ಜಗತ್ತಿನ ಚ ರಾ ಚ ರ ಪ್ರಾ ಣಿ ಗ ಳೆ ಲ್ಲ ವೂ ನಾರಾಯಣನಾದ ಪುರುಷೋತ್ತಮನ ರೂಪವೇ ಎಂಬುದು. ತಾನೂ ಸಹ ಅದೇ ಈಶ್ವರನಲ್ಲಿಯೇ ಮಿಲಿತವಾಗಬೇಕು. "ನಾನು ಆತನಿಂದ ಭಿನ್ನನಲ್ಲ" ಎಂಬುದೇ ಅನನ್ಯಭಕ್ತಿ. ಈ ಅನನ್ಯಭಾವವು ದೃಢವಾದರೆ ಅದನ್ನನುಸರಿಸಿಯೇ ನಮ್ಮ ಆಚರಣೆಯೂ ಮೈಗೂಡುವುದು. ಇದೇ ಮಾನವೀ ಉನ್ನತಿಯ ಪೂರ್ಣಾವಸ್ಥೆಯು.

**ಎಲ್ಲವೂ ವಾಸುದೇವನೇ** ಎಂಬುವ ನಿಶ್ಚಯವು ಬರುವವರೆಗೂ ನಮ್ಮ ಉಪಾಸನೆಯು ಅಲ್ಪವಾಗಿಯೇ ನಿಲ್ಲುವುದು.

## ದ್ವಂದ್ವ ಮೋಹ

ಎಲ್ಲಿಯವರೆಗೆ **ಎಲ್ಲವೂ ವಾಸುದೇವನೇ** ಎಂಬ ಭಾವವು ದೃಢವಾಗುವುದಿಲ್ಲವೋ ಅಲ್ಲಿಯವರೆಗೂ ಮನುಷ್ಯನು **ದ್ವಂದ್ವ ಮೋಹದಲ್ಲಿ** ಸಿಕ್ಕಿಬಿದ್ದಿರುವನು. ನಾನು–ನನ್ನದು, ನೀನು–ನಿನ್ನದು, ಅವನು–ಅವನದು ಎಂಬುದೆಲ್ಲವೂ ದ್ವಂದ್ವದ ವ್ಯವಹಾರವೇ. ಇದರಿಂದಲೇ ಜಗತ್ತಿನ ಸಮಸ್ತ ವ್ಯವಹಾರವೂ ನಡೆಯುತ್ತಿರುವುದು. ರಾಜ್ಯ ರಾಜ್ಯಗಳಲ್ಲಿ–ಸಮಾಜ ಸಮಾಜಗಳಲ್ಲಿ–ವ್ಯಕ್ತಿ ವ್ಯಕ್ತಿಗಳಲ್ಲಿ ಹುಟ್ಟಿ ಬೆಳೆಯುತ್ತಿರುವ ಇಚ್ಛಾದ್ವೇಷಗಳೆಲ್ಲಾ ಈ ದ್ವಂದ್ವಮೋಹದಿಂದಲೇ. ಎಲ್ಲಾ ಪಾಪಕ್ಕೆ ಇದೇ ಮೂಲ.

**ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ |**
**ತೇ ದ್ವನ್ದ್ವಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ||**
(೭–೨೮)

ಯಾರು ದ್ವಂದ್ವಮೋಹದಿಂದ ನಿರ್ಮುಕ್ತರಾಗಿರುವರೋ ಅಂತಹ ಪುಣ್ಯಕರ್ಮಿಗಳಾದ ಮನುಷ್ಯರ ಪಾಪಗಳು ನಷ್ಟವಾಗಿವ ಅವರೇ ಪರಮೇಶ್ವರನಲ್ಲಿ ಅನನ್ಯಭಕ್ತಿಯನ್ನು ಮಾಡುತ್ತಾರ ಎಂಬುದರಿಂದ ದ್ವಂದ್ವಮೋಹದಿಂದ ಬಿಡುಗಡೆಯಾಗುವವನು ಪಾಪದಿಂದ ಬಿಡಲ್ಪಡುತ್ತಾನೆ ಎಲ್ಲಿಯವರೆಗೆ ಮೋಹವು ಇರುವುದೋ ಅಲ್ಲಿಯವರೆಗೂ ಪಾಪವು ಅಂಟಿಕೊಂಡೇ ಇರುವುದು ದ್ವಂದ್ವ ಮೋಹವಿಮುಕ್ತಿಯೇ ನಿಜವಾದ ಸುಖಕ್ಕೆ ಮೂಲ '**ಜರಾಮರಣ ಮೋಕ್ಷಾಯ**' ವೃದ್ಧಾಪ್ಯ ಮರಣಗಳು ನಮ್ಮನ್ನು ಎದುರಿಸಿ ನಿಂತಿವೆ ಅವುಗಳನ್ನಾರೂ ತಪ್ಪಿಸಿಕೊಳ್ಳಲಾರರು ಚಿಂತೆಯೂ ವೃದ್ಧಾಪ್ಯವೇ ಎಲ್ಲ ವಿಧವಾದ ಚಿಂತಾದುಃಖ ಸಂಕಟಗಳೂ ದ್ವಂದ್ವಮೋಹವಿಮುಕ್ತಿಯಿಂದ – ತತ್ತ್ವಜ್ಞಾನದಿಂದ – ಸಮಸ್ತವೂ ಜಗದೀಶನಾದ ಪುರುಷೋತ್ತಮನೇ ಎಂಬ ಭಾವದಿಂದ ನಿವೃತ್ತಿಯಾಗುವುವು

ಈ ದ್ವಂದ್ವಮೋಹರಹಿತ ತತ್ತ್ವಜಾನವನ್ನು ಬ್ರಹ್ಮ ನಿಶ್ಚಯ, ಅಧ್ಯಾತ್ಮನಿಶ್ಚಯ, ಕರ್ಮನಿಶ್ಚಯ, ಅಧಿಭೂತನಿಶ್ಚಯ, ಅಧಿದೈವತನಿಶ್ಚಯ ಎಂಬುದಾಗಿ ವಿಭಾಗಮಾಡಬಹುದು ಇದು ಮಹತ್ವಪೂರ್ಣವಾದುದು ಇದರಿಂದ ಸಾಧಕನಿಗೆ ತನ್ನ ಕರ್ತವ್ಯಾ ಕರ್ತವ್ಯ ನಿರ್ಣಯವಾಗಬಹುದು ಇದನ್ನು ಮುಂದಿನ ಅಧ್ಯಾಯ ದಲ್ಲಿ ವಿವರಿಸುತ್ತೇವೆ.

# ಅ ಕ್ಷ ರ ಬ್ರ ಹ್ಮ ಯೋ ಗ



ಈ ಅಷ್ಟಮಾಧ್ಯಾಯದ ಹೆಸರು **ಅಕ್ಷರಬ್ರಹ್ಮಯೋಗ** ಅವಿನಾಶಿಯಾದ ಆತ್ಮನೊಡನೆ ಸೇರುವ ಉಪಾಯವು ಯಾವ ಯೋಗದಲ್ಲಿದೆಯೋ ಅದು **ಅಕ್ಷರ ಬ್ರಹ್ಮಯೋಗ** ಯೋಗ ವೆಂಬುದರ ಅರ್ಥವು ಯುಕ್ತಿ ಈ ಜಗತ್ತಿನಲ್ಲಿ ಹುಟ್ಟುವ ಪ್ರತಿಯೊಂದು ಪ್ರಾಣಿಯೂ ಅಕ್ಷರಬ್ರಹ್ಮನೊಡನೆ ಸೇರುವುದ ಕ್ಕಾಗಿಯೇ ಬಂದಿದುವುದು ಯಾವ ಉಪಾಯದಿಂದ ಈ ಧ್ಯೇಯವು ಸಾಧ್ಯವಾಗುವುದೋ ಅದನ್ನು ಮನುಷ್ಯನು ತಿಳಿಯ ಬೇಕು

## ಅಕ್ಷರಬ್ರಹ್ಮನ ಸ್ವರೂಪ

**ಅಕ್ಷರಂ ಪರಮಂ ಬ್ರಹ್ಮ**–ಈ ಮೂರು ಶಬ್ದಗಳಿಂದ ಅಕ್ಷರ ಬ್ರಹ್ಮನ ಸ್ವರೂಪವು ತಿಳಿಸಲ್ಪಟ್ಟಿದೆ ಬ್ರಹ್ಮ ಎಂದರ ದೊಡ್ಡದು. ಅತಿ ದೊಡ್ಡದು ಅತಿ ದೊಡ್ಡ ಶಕ್ತಿಯುಳ್ಳ ತತ್ತ್ವವು ಯಾವ ತತ್ತ್ವವು ಎಲ್ಲಕ್ಕಿಂತಲೂ ವಿಶಾಲವಾಗಿ, ಎಲ್ಲ ಕ್ಕಿಂತಲೂ ಶ್ರೇಷ್ಠವಾಗಿ, ಎಲ್ಲಕ್ಕಿಂತಲೂ ಸಮರ್ಥವಾಗಿ ಎಲ್ಲವನ್ನು ಮೀರಿದಯೋ ಅದಕ್ಕೆ ಬ್ರಹ್ಮನೆಂದು ಹೇಳುತ್ತಾರ ಯಾವ ವಿಧವಾದ ಸಣ್ಣತನ, ನ್ಯೂನತೆ ಅಥವಾ ಹೀನತೆಯು ಅದರಲ್ಲಿಲ್ಲ ಆದುದರಿಂದಿ ದನ್ನು ಪರಮ ಬ್ರಹ್ಮ, ಪರಬ್ರಹ್ಮ ಎಂದು ಕರೆಯುತ್ತಾರೆ ಎಲ್ಲ ಕ್ಕಿಂತಲೂ ದೊಡ್ಡದು ಎಂದು ಹೇಳುವಾಗ ಇದರ ಮಹತ್ವವು

ಸೂಚಿಸಲ್ಪಡುವುದಾದರೂ ಸಂಪೂರ್ಣವಾಗಿ ಇದರ ದೊಡ್ಡಸ್ತಿಕೆಯು ಗೊತ್ತಾಗುವುದಿಲ್ಲವಾದುದರಿಂದ ಅದನ್ನು ಚೆನ್ನಾಗಿ ಗೊತ್ತುಪಡಿಸುವುದಕ್ಕಾಗಿ **"ಅಕ್ಷರ"** ಎಂಬ ಶಬ್ದವು ಉಪಯೋಗಿಸಲ್ಪಟ್ಟಿದೆ.

ಅಕ್ಷರ ಎಂಬುದನ್ನು ಎರಡು ರೂಪವಾಗಿ ಅರ್ಥಮಾಡಬಹುದು. ಅ+ಕ್ಷರ, ನಾಶವಾಗದಿರುವುದು. ಅವಿನಾಶಿ ಎಂಬುದು ಒಂದು ಅರ್ಥವಾದರೆ, ಅಕ್ಷ+ರಮ್, ಕಣ್ಣು ಯಾವುದರಲ್ಲಿ ರಮಣಮಾಡುವುದೋ–ಆನಂದಿಸುವುದೋ ಅದು ಅಕ್ಷರ. ಅವಿನಾಶಿ ಎಂಬುದರ ಅರ್ಥದಿಂದ **ಅಮೂರ್ತಬ್ರಹ್ಮವೂ** ಕಣ್ಣು ಯಾವುದರಲ್ಲಿ ರಮಣಮಾಡುವುದೋ ಎಂಬುದರ ಅರ್ಥದಿಂದ **ಮೂರ್ತ ಬ್ರಹ್ಮವೂ** ಸೂಚಿತವಾಗುತ್ತವೆ. ಈ ಮೂರ್ತ ಮತ್ತು ಅಮೂರ್ತ ಬ್ರಹ್ಮಗಳು ಸೇರಿ ಅಕ್ಷರಬ್ರಹ್ಮವಾಗಿದೆ.

**ಜ್ಞಾಜ್ಞೌ ದ್ವಾವಜಾವೀಶಾನೀಶಾವಜಾಹ್ಯೇಕಾ ಭೋಕ್ತೃ**
**ಭೋಗಾರ್ಥಯುಕ್ತಾ । ಅನಂತಶ್ಚಾತ್ಮಾ ವಿಶ್ವರೂಪೋಹ್ಯಕರ್ತಾ**
**ತ್ರಯಂ ಯದಾ ವಿಂದತೇ ಬ್ರಹ್ಮಮೇತತ್ ॥**

(ಶ್ವೇತಾಶ್ವತರ. ೧—೯)

ಒಂದು (ಜ್ಞೌ) ಸರ್ವಜ್ಞನಾದ ಈಶ್ವರನು. ಎರಡನೆಯದು (ಅಜ್ಞೌ)ಈಶ್ವರನಲ್ಲದುದು. ಮೂರನೆಯದು ಅಜಾ ಇದರ ಭೋಗಕ್ಕೆ ಉಪಯೋಗವಾಗುವುದು. ಇವುಗಳಲ್ಲಿ ಯಾವುದು ಸರ್ವಜ್ಞನಾದ ಈಶ್ವರನೋ ಅದು (ವಿಶ್ವರೂಪಃ ಆತ್ಮಾ ಅಕರ್ತಾ) ವಿಶ್ವರೂಪಿಯಾದ ಅಕರ್ತನಾದ ಆತ್ಮನು. ಈ ಮೂರೂ ಎಲ್ಲಿ ಸೇರುವುದೋ, ಹೊಂದಲ್ಪಡುವುದೋ ಅದು ಬ್ರಹ್ಮ.

ಹೀಗೆ ಬ್ರಹ್ಮನಲ್ಲಿ ಪ್ರಕೃತಿಭಾವ, ಜೀವಭಾವ, ಈಶ್ವರ ಭಾವ ಈ ಮೂರೂ ಸೇರಿರುವುವು. ಇವುಗಳಲ್ಲಿ ಜೀವಾತ್ಮ ಮತ್ತು ಪರಮಾತ್ಮ ಇವುಗಳ ಸೇರುವಿಕೆಯು ಆತ್ಮಭಾವವಲ್ಲಿ. ಇದೇ ಆತ್ಮಭಾವವೇ ಅ+ಕ್ಷರ ಅವಿನಾಶಿಯೆಂದು ಹೇಳಲ್ಪಡುತ್ತದೆ ಮತ್ತು ಭೋಗ್ಯವಾದ ಪ್ರಾಕೃತಿಕ ಪದಾರ್ಥವು ಅಕ್ಷ+ರಂ ಕಣ್ಣುಗಳಿಗೆ ರಮಣೀಯತೆಯನ್ನುಂಟುಮಾಡಿ ಮೋಹಗೊಳಿಸುವುದರಿಂದ ವಿನಾಶೀ ಅಥವಾ **ಮೂರ್ತ** ಎಂದು ಹೇಳಲ್ಪಡುತ್ತದೆ. ಹೀಗೆ **ಮೂರ್ತಾಮೂರ್ತವು** ಬ್ರಹ್ಮನಾಗಿದೆ.

**ದ್ವೇವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾ ಮೂರ್ತಂ ಚ ।**

(ಬೃ. ೨-೩-೧)

"ಬ್ರಹ್ಮನಿಗೆ ಎರಡು ರೂಪಗಳು. ಒಂದು ಮೂರ್ತ. ಮತ್ತೊಂದು ಅಮೂರ್ತ." ಎಂದು ಉಪನಿಷತ್ತುಗಳಲ್ಲಿ ಹೇಳಲ್ಪಡುವುದು. ಮೂರ್ತರೂಪದಲ್ಲಿ—ಮೂರ್ತಿಮಾನ್ ರೂಪದಲ್ಲಿ ಚಕ್ಷುಸ್ಸು ರಮಿಸುತ್ತದೆ. ಆದುದರಿಂದ ಅದು ಅಕ್ಷ+ರಮ್ ಆಗುತ್ತದೆ. ಅಮೂರ್ತ ಬ್ರಹ್ಮ ಅವಿನಾಶಿಯಾದುದರಿಂದ ಅದರ ವರ್ಣನೆಯು ಅ+ಕ್ಷರಂ ಎಂದಾಗುತ್ತದೆ. ಬ್ರಹ್ಮನು ಮೂರ್ತ ಅಥವಾ ಮೂರ್ತಿಮಾನ್, (ರೂಪವಿರುವವನು.) ಆದುದರಿಂದ ಅವನನ್ನು ಮೇಲೆ ಹೇಳಿದ ಶ್ವೇತಾಶ್ವತರ ಉಪನಿಷತ್ತಿನಲ್ಲಿ **ವಿಶ್ವ ರೂಪ ಆತ್ಮಾ** ಎಂದು ಹೇಳಿದ್ದಾರೆ. ವಿಶ್ವದ ರೂಪವು ಯಾವುದಿದೆಯೋ ಆ ರೂಪವೇ ಆತ್ಮನಿಗಿದೆ. ಅದೇ ಈ ಬ್ರಹ್ಮನ ರೂಪ. ಈ ಆತ್ಮ ಅಥವಾ ಬ್ರಹ್ಮನು ವಿಶ್ವದ ರೂಪವನ್ನು ಧಾರಣೆಮಾಡಿದ್ದಾನೆ. ನಮ್ಮ ಕಣ್ಣೆದುರಿಗೆ ಯಾವ ರೂಪವು

ಕಾಣುತ್ತಿದೆಯೋ ಅದು ಪರಮಾತ್ಮ ಅಥವಾ ಪರಬ್ರಹ್ಮನ ರೂಪ ವಾಗಿದೆ. ಕಣ್ಣಿನ ಎದುರಿಗೆ ಎಂತೆಂತಹ ರೂಪವು ಕಾಣು ವುದೋ ಅದೆಲ್ಲಾ ವಿಶ್ವರೂಪನಾದ ಈ ಆತ್ಮನ ರೂಪವೇ ಆಗಿದೆ. ಆದುದರಿಂದ ಈ ವಿಶ್ವದ ರೂಪವು ಮತ್ತಾರದೂ ಅಲ್ಲ. ಈ ವಿಶ್ವದ ರೂಪವನ್ನು ಈ ಆತ್ಮನೇ ಧಾರಣೆಮಾಡಿದ್ದಾನೆ. ಆತನು ವಿಶ್ವದ ರೂಪದ ಹಿಂದೆ ಮರೆಯಾಗಿದ್ದಾನೆ, ಎಂದು ಹೇಳಬಹುದು. ನಮ್ಮ ಶರೀರದಲ್ಲಿರುವ ಈ ಜೀವಾತ್ಮನು ಈ ಶರೀರದ ರೂಪವನ್ನು ಹೇಗೆ ಧಾರಣೆಮಾಡಿದ್ದಾನೆಯೋ ಹಾಗೆಯೇ ಈ ವಿಶ್ವದಲ್ಲಿರುವ ಪರ ಮಾತ್ಮನು ವಿಶ್ವದ ರೂಪವನ್ನು ಧಾರಣೆಮಾಡಿದ್ದಾನೆ. ಈ ವಿಶ್ವರೂಪವು ಎಂತಹುದು ಎಂಬುದು ಹನ್ನೊಂದನೆಯ ಅಧ್ಯಾಯದ ವಿವರಣೆಯಲ್ಲಿ ವಿಶದವಾಗಿ ತಿಳಿಯಬರುವುದು.

## ಅಕ್ಷರಬ್ರಹ್ಮನ ಸ್ವಭಾವ

ಈ ಅಕ್ಷರ ಬ್ರಹ್ಮನ ಸ್ವಭಾವವು ಅಕ್ಷಯವಾದುದು. ಸ್ವಭಾವಶಬ್ದದ ಅರ್ಥವು ತನ್ನ ಭಾವ—ತನ್ನ ಧರ್ಮ ಎಂದಾ ಗುತ್ತದೆ. ಯಾವುದು ತನ್ನ ಸ್ವಭಾವವೋ ಅದು ತನ್ನಿಂದ ಬದ ಲಾಗದು. ಇದನ್ನೇ ಅಧ್ಯಾತ್ಮ ಎನ್ನುತ್ತಾರೆ. ಅಧ್ಯಾತ್ಮ ಎಂಬುದು ಆತ್ಮನ ಮೇಲೆ ಯಾವುದು ಪ್ರಕಟವಾಗುವುದೋ ಅದು. ನಮ್ಮ ಶರೀರದಲ್ಲಿರುವ ಜೀವಾತ್ಮನ ಪ್ರಭಾವವು ಅವನ ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ ಇವುಗಳ ಮೂಲಕ ಪ್ರಕಟವಾಗುತ್ತದೆ. ಇದೇ ಈ ಶರೀರದಲ್ಲಿ ತೋರುವ ಅಧ್ಯಾತ್ಮವು. ಏಕೆಂದರೆ ಇದೇ ಈ ಶರೀರದಲ್ಲಿರುವ ಆತ್ಮನ ಮೇಲೆ ತೋರಿ ಬರುವ ಆತ್ಮನ ಸ್ವಭಾವವಾಗಿದೆ. ಇದರಿಂದ ಇವದೊಳಗೆ ಆತ್ಮ ನಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ.

ಹೀಗೆಯೇ ಬ್ರಹ್ಮಾಂಡದಲ್ಲಿ ಯಾವ ವಿಶ್ವಾತ್ಮ ಅಥವಾ ಪರಮಾತ್ಮನಿದ್ದಾನೆಯೋ ಅವನ ಸ್ವಭಾವ ಅಥವಾ ಅಧ್ಯಾತ್ಮವು ಅಗ್ನಿ, ವಾಯು, ಸೂರ್ಯ, ಚಂದ್ರ ಮುಂತಾದುವುಗಳಿಂದ ಪ್ರಕಟವಾಗುತ್ತದೆ. ನಮ್ಮ ಶರೀರದಲ್ಲಿ ಕಣ್ಣು ಇರುವಂತೆ ಬ್ರಹ್ಮಾಂಡದಲ್ಲಿ ಸೂರ್ಯನು ಇದ್ದಾನೆ. ಹೀಗೆ ಸಂಪೂರ್ಣ ಸೃಷ್ಟಿಯಲ್ಲಿರುವ ಪದಾರ್ಥಗಳಲ್ಲೆಲ್ಲಾ ಯಾವ ಯಾವುದು ಆಯಾ ವಸ್ತುವಿನ ಸ್ವಭಾವವಾಗಿದೆಯೋ ಅದೆಲ್ಲಾ ಈ ವಿಶ್ವಾತ್ಮನದೇ. ವಸ್ತುಮಾತ್ರದ ಸ್ವಭಾವವಾವುದೋ ಅದೇ ವಿಶ್ವದ ಸ್ವಭಾವವೂ ಆಗಿರುವುದು. ಅದೆಲ್ಲಾ (ಅಧಿ+ಆತ್ಮಂ) ಈ ಆತ್ಮನ ಭಾವವೇ ಮತ್ತಾರದೂ ಅಲ್ಲ. ಏಕೆಂದರೆ ಈ ಸೃಷ್ಟಿಯಲ್ಲಿ ಮತ್ತಾವ ವಸ್ತುವೂ ಇಲ್ಲವೇ ಇಲ್ಲ.

ಸ್ಥೂಲಭೂತ, ಜೀವತತ್ತ್ವ ಮತ್ತು ಪರಮಾತ್ಮವೆಂಬ ಮೂರು ಪದಾರ್ಥಗಳು ಕ್ಷರ, ಅಕ್ಷರ ಪುರುಷೋತ್ತಮ ಶಬ್ದಗಳಿಂದ ಆಗಲೇ ವರ್ಣಿಸಲ್ಪಟ್ಟಿವೆ. ಈ ಮೂರೂ ಪರಸ್ಪರ ಭಿನ್ನವಲ್ಲ ಎಂಬುದನ್ನು ಏಳನೆಯ ಅಧ್ಯಾಯದಲ್ಲಿ ಮೇಲಿಂದ ಮೇಲೆ ಒತ್ತಿ ಹೇಳುತ್ತಾ ಬಂದಿದ್ದೇವೆ ಮಾವಿನಹಣ್ಣಿನ ಉಪಮಾನದಿಂದ. ಅದರ ಸ್ಥೂಲ ಆಕಾರ ಅದರೊಳಗಿನ ಸಿಹಿ ರುಚಿ ಇವೆರಡೂ ಸೇರುವಿಕೆಯಿಂದಾದ **ಹಣ್ಣಿನ ಸಂಪೂರ್ಣ ರೂಪ.** ಈ ಮೂರೂ ಒಂದೇ ವಸ್ತುವಿನಲ್ಲಿನ ಕಲ್ಪನೆಗಳು ಮಾತ್ರ. ವಸ್ತುವಿನಲ್ಲಿ ಭೇದವಿಲ್ಲ ಎಂಬುದನ್ನು ಕ್ಷರ (ಸ್ಥೂಲಭೂತ) ಅಕ್ಷರ ಜೀವತತ್ತ್ವ (ಸೂಕ್ಷ್ಮಜೀವ) ಈ ಎರಡರ ಸೇರುವಿಕೆಯಿಂದಾದ ಪುರುಷೋತ್ತಮ. ಈ ಮೂರೂ ತೋರಿಕೆಗೆ ಮೂರಾದರೂ ಇರುವುದು ಒಂದೇ ಎಂಬುದನ್ನು ವಿವರಿಸಿದ್ದೇವೆ. ಜಡ

ಮತ್ತು ಚೇತನ ಎಂಬುವುಗಳು ಒಂದೇ ವಸ್ತುವಿನಲ್ಲಿನ ಕಲ್ಪನೆಗಳು ಮಾತ್ರ. ಕೆಲವರ ಕಲ್ಪನೆಯಂತೆ ಮಣ್ಣು ಮತ್ತು ನೀರಿನಂತೆ ಜಡ ಚೇತನಗಳು ಪರಸ್ಪರ ಬೇರೆಯಾಗಿಲ್ಲ. ಒಂದೇ ಸದ್ವಸ್ತುವು ಚೇತನ ರೂಪದಲ್ಲಿ ಸ್ಥೂಲಪದಾರ್ಥಗಳ ಜಡರೂಪವಲ್ಲಿ ತೋರುವುದು. ಅಥವಾ ಈ ಎರಡೂ ಒಂದೇ ವಸ್ತುವಿನ ಎರಡು ಭಾವಗಳು ಎಂಬುದು ಇಲ್ಲಿನ ಸ್ವಭಾವ ಶಬ್ದಕ್ಕೆ ಅರ್ಥ. ಆದುದರಿಂದ ಈ ಅಕ್ಷರ ಬ್ರಹ್ಮನ ಸ್ವಭಾವವೂ ಅಕ್ಷಯವೇ. ಎಂದೆಂದಿಗೂ ನಾಶವಾಗುವುದಲ್ಲ.

## ಬ್ರಹ್ಮನ ಕರ್ಮ

ಸಂಪೂರ್ಣ ಜಗತ್ತಿನಲ್ಲಿ ಈ ಬ್ರಹ್ಮನ ಸ್ವಭಾವವು ನಡೆಯುತ್ತಾ ಇದೆ. ಈತನು ತಾನು ಸ್ವತಃ ಕರ್ಮಗಳನ್ನು ಮಾಡದಿದ್ದರೂ ಕರ್ಮವಂತೂ ಅವಿಚ್ಛಿನ್ನವಾಗಿ ನಡೆಯುತ್ತಲೇ ಇದೆ. ಈ ಕರ್ಮಗಳಿಂದ ಬ್ರಹ್ಮನಿಗೆ ಆಗಬೇಕಾದುದೇನೂ ಇಲ್ಲ. ಯಾವ ಕಾಮನೆಯೂ ಇಲ್ಲ. ಆದುದರಿಂದ ಕರ್ಮವೂ ಸಂಪೂರ್ಣ ನಿಷ್ಕಾಮ ಭಾವದಿಂದಲೇ ನಡೆಯುತ್ತಾ ಇದೆ. ಈ ನಿಷ್ಕಾಮಕರ್ಮದಿಂದ ಏನಾಗುತ್ತಿದೆ? ಎಂದು ಕೇಳಿದರೆ (ಭೂತ+ಭಾವ+ಉದ್ಭವ) ಭೂತಮಾತ್ರಗಳ ಸತ್ತೆಯು ಉದ್ಭವವಾಗುತ್ತಿದೆ. ಬೀಜದಿಂದ ವೃಕ್ಷ; ವೃಕ್ಷದಿಂದ ಬೀಜ. ಈ ರೀತಿಯಲ್ಲಿ ಅಖಂಡ ಭೂತಗಳ ಉತ್ಪತ್ತಿಯು ಆಗುತ್ತಿದೆ. ಅದಕ್ಕಾಗಿ ಇದರ ಶಕ್ತಿಯು (ವಿಸರ್ಗಃ) ಕೊಡಲ್ಪಡುತ್ತಿದೆ. ಇದೇ ಬ್ರಹ್ಮನ ಯಜ್ಞವು. ಇದೇ ವಿಶ್ವಕರ್ಮನ ಆತ್ಮಯಜ್ಞವು. ಹೀಗೆ ಅಖಂಡ ಕರ್ಮಪ್ರವಾಹವು ನಡೆದುಕೊಂಡು ಹೋಗುತ್ತಿದೆ. ಅದು ಮೇಲೆ ಹೇಳಿದ ಸ್ವಭಾವಕ್ಕನುಕೂಲವಾಗಿಯೇ ಇದೆ.

## ಕ್ಷರಭಾವ

ಜಗತ್ತಿನಲ್ಲಿ ಕಾಣಬರುತ್ತಿರುವುದು ಕ್ಷರಭಾವವು. ಪ್ರತಿಯೊಂದು ವಸ್ತುವೂ ನಾಶಕ್ಕೆ ಎಡೆಯಾಗಿದೆ. ಹುಟ್ಟಿದ ಪದಾರ್ಥವೆಲ್ಲಾ ನಾಶವನ್ನು ಹೊಂದಲೇಬೇಕು. ಬ್ರಹ್ಮಲೋಕದಿಂದ ಹಿಡಿದು ಮೃತ್ಯುಲೋಕದವರೆಗೆ ಕಾಣುವ ಎಷ್ಟೆಷ್ಟು ವಸ್ತುಗಳಿವೆಯೋ ಅವೆಲ್ಲವೂ ನಾಶವನ್ನು ಹೊಂದುವುದಾದುದರಿಂದ ಇದು ಕ್ಷರಭಾವ. ಈ ಕ್ಷರಭಾವವು ಪ್ರತಿಯೊಂದು ಭೂತಕ್ಕೆ ಇದ್ದೇ ಇದೆ. ಸೂಕ್ಷ್ಮಾತಿಸೂಕ್ಷ್ಮ ವಸ್ತುವೂ ವಿಶ್ವದ ಒಂದು ಅಂಗ. ಅದಕ್ಕೆ ಪರಿಮಿತಿ ಇದೆ. ಅದರ ಕಾಲವು ಮುಗಿದನಂತರ ಅದು ನಾಶಹೊಂದಲೇ ಬೇಕು. ಅಂಶವು ನಾಶವಾದರೂ ವಿಶ್ವವು ನಾಶವಾಗದು. ವಿಶ್ವದ ಕ್ಷರಭಾವವು ನಾಶವಾಗುವುದಾದರೂ ಅಕ್ಷರಭಾವವು ನಾಶಹೊಂದಲಾಗದು. ಆದುದರಿಂದ "ಅಧಿಭೂತಂ ಕ್ಷರೋ ಭಾವಃ" ಎಂದು ಹೇಳಲ್ಪಟ್ಟಿದೆ. ಪ್ರತಿಯೊಂದು ಭೂತವೂ ವಿಶ್ವಭಾವದಲ್ಲಿ ಸೇರುವುದಾದುದರಿಂದ ಅದು ಕ್ಷರವಾದರೂ ಅಕ್ಷರದೊಡನೆ ವಿಲೀನವಾದಾಗ ಅದು ಅಕ್ಷರವೇ ಆಗುವುದು. ಅದೇ ಅಲ್ಪವು ವಿಶ್ವದೊಡನೆ (ಭೂಮಾ) ಮಿಳಿತವಾದಾಗ ಅದೂ ದೊಡ್ಡದೇ ಆಗುವುದು. ಆಗ ನಾಶದ ಭಯವಿಲ್ಲ.

## ಪುರುಷ

ಈ ಕ್ಷರದೊಳಗಿರುವ ಅಕ್ಷರನನ್ನೇ ಪುರುಷನೆನ್ನುತ್ತಾರೆ. ಪುರುಷ ಶಬ್ದದ ಅರ್ಥವು (ಪುರಿ+ವಸ್) ಪಟ್ಟಣದಲ್ಲಿ ವಾಸ ಮಾಡುವವನು ಎಂದಾಗುತ್ತದೆ. ಪುರಿಯು ನಾಶವಾದರೂ ಅವಿನಾಶಿಯಾಗಿ ನಿಲ್ಲುವವನು ಈ ಪುರುಷನು. ಇವನನ್ನು ದೇಹೀ

ಆತ್ಮಾ ಎಂದು ಕರೆಯುತ್ತಾರೆ. ಭೂತ ಮಾತ್ರವೆಲ್ಲಾ ಪುರವು. ಆ ಪುರವು ಸಪ್ತಧಾತುಗಳಿಂದಾಗಿದೆ.

"ಸಪ್ತಭಿಃ ಧಾತುಭಿಃ ಪೂರ್ಯತೇ ಇತಿ ಪೂಃ ಶರೀರಂ" ಸಪ್ತ ಧಾತುಗಳಿಂದ ಪರಿಪೂರ್ಣವಾಗಿರುವುದಾದುರಿಂದ ಇದು ಪುರೀ ಅಥವಾ ಶರೀರ ಎನ್ನಿಸಿಕೊಳ್ಳುವುದು.

## ಯಜ್ಞಪುರುಷ

ಮನುಷ್ಯ ಜೀವನವೇ ಒಂದು ಯಜ್ಞ. ಇದು ಸಹಜ ವಾಗಿ ಒಂದು ನೂರು ವರ್ಷ ನಡೆಯುವ ಯಜ್ಞವು. ಈ ಯಜ್ಞದ ಯಜಮಾನನು ಆತ್ಮನು. ಇದರ ಅಧಿಷ್ಠಾತೃವು ಯಜ್ಞಪುರುಷನು. ಯಾವನು "ನಾನು ಇದ್ದೇನೆ" ಎಂದು ದೇಹ ದಲ್ಲಿರುವನೋ ಅವನು ಅಧಿಯಜ್ಞನು. ಈ ದೇಹದಲ್ಲಿರುವ ಚೇತನ ತತ್ತ್ವವು ಜೀವನ ಯಜ್ಞಕ್ಕೆ ಅಧಿಷ್ಠಾತೃವು. ಯಜ್ಞವ ಅಂಗಗಳಾದ ಕ್ರತು, ಯಜ್ಞ, ಸ್ವಧಾ, ಔಷಧಿ, ಮಂತ್ರ, ತುಪ್ಪ, ಅಗ್ನಿ, ಆಹುತಿ ಇವೆಲ್ಲವೂ ನಾನೇ. ಇಲ್ಲಿ ನಾನು ಎಂಬುದು ಆತ್ಮ. ಅವನೇ ಯಜ್ಞಪುರುಷನು. ಅರ್ಪಣ, ಹವಿ, ಅಗ್ನಿ, ಯಜಮಾನ, ಹವನ, ಕರ್ಮ ಮುಂತಾದುವೆಲ್ಲಾ ಬ್ರಹ್ಮವೇ. ಅಲ್ಲಿ ಎರಡನೆಯದಾದ ವಸ್ತುವೇ ಇಲ್ಲ. "ನಾನು" ಎನ್ನುವ ಆತ್ಮನಿಗೆ ೧. ಅಕ್ಷರಭಾವ. ೨. ಕ್ಷರಭಾವ. ೩. ಸ್ವಭಾವ. ೪. ಉತ್‌ಭಾವ ೫. ಪುರುಷಭಾವ (ಅಧಿದೈವತ). ೬. ಯಜ್ಞ (ಅಧಿಯಜ್ಞ), ಹೀಗೆ ಆರು ಭಾವಗಳಿವೆ. ಪ್ರತಿಯೊಬ್ಬ ಮನುಷ್ಯನೂ ಪರಮಾತ್ಮನ ಅಂಶವಾದುದರಿಂದ ಪರಮೇಶ್ವರಾರ್ಪಣ ಬುದ್ಧಿಯಿಂದ ಫಲಾಪೇಕ್ಷೆಯಿಲ್ಲದೆ ಕರ್ತವ್ಯವೆಂದು ಕರ್ಮಮಾಡ ಬೇಕೆಂಬ ಉಪದೇಶವು ಮನುಷ್ಯನಿಗೆ ಇಲ್ಲಿ ಸಿಕ್ಕುತ್ತದೆ.

ಪರಮೇಶ್ವರನ ಸತ್ತೆಯು ಸಾರ್ವಭೌಮ. ಆತನ ಕರ್ಮವು ವಿಶ್ವವ್ಯಾಪಕ. ಮನುಷ್ಯನು ಆತನ ಅಂಶವಾದುದರಿಂದ ಅವನೂ ಸಹ ತನ್ನ ಕರ್ಮವನ್ನು ಪರಮೇಶ್ವರನ ನಿಯಮವಾದ ಸೃಷ್ಟಿ ನಿಯಮಕ್ಕೆ ಅನುಕೂಲವಾಗುವಂತೆಯೇ, ಅದರೊಡನೆ ಮಿಲನ ವಾಗುವಂತೆಯೇ ನಡೆಸಬೇಕು. ವಿಶ್ವವ್ಯಾಪಕವಾದ ಈ ಶ್ವ ರಿ ೀ ನಿಯಮವನ್ನು ಬಿಟ್ಟು ಆತನ ಜಗತ್ಕಲ್ಯಾಣರೂಪ ಯಜ್ಞಕ್ಕೆ ವಿರೋಧವಾಗಿ ನಡೆಯುವುದಾದರೆ ಮನುಷ್ಯನ ಪತನವು-ನಾಶವು ಸಿದ್ಧ. ವಿಶ್ವನಿಯಮಕ್ಕೆ ವಿರೋಧವಾದ ವ್ಯಕ್ತಿಯ ಉನ್ನತಿಯು ಹೇಗೆ ಸಾಧ್ಯ ?

ಮನುಷ್ಯನ ಸಮಸ್ತ ಅವಯವವೂ, ಶಕ್ತಿಯೂ ವಿಶ್ವಕ್ಕೆ ಅಧೀನವಾಗಿದೆ. ಒಂದು ದೊಡ್ಡ ಮಣ್ಣಿನ ರಾಶಿಯೊಳಗಿನಿಂದ ಒಂದು ಹಿಡಿ ಮಣ್ಣನ್ನು ತೆಗೆವಂತೆ. ಮನುಷ್ಯನ ಕಣ್ಣು ಸೂರ್ಯ ತತ್ತ್ವದಿಂದಲೇ ಹುಟ್ಟಿರುವುದು. ಇದು ಸೂರ್ಯನ ನಿಯಮಕ್ಕೆ ವಿರೋಧವಾಗಿ-ಎದುರಾಗಿ ನಿಲ್ಲಬಲ್ಲುದೆ ? ಅದು ತನ್ನ ದೃಷ್ಟಿಯ ಪ್ರತಿಯೊಂದು "ಸೂಕ್ಷ್ಮಾತಿಸೂಕ್ಷ್ಮ" ಇಂದ್ರಿಯ ಶ ಕ್ತಿ ಯ ನ್ನು ಜಗದ್ವ್ಯಾಪಿಯಾದ ಸೂರ್ಯನ ತೇಜಸ್ಸಿನಿಂದಲೇ ಪಡೆದು ಬದುಕ ಬೇಕಲ್ಲವೆ ? ಹಾಗೆಯೇ ಮನುಷ್ಯ ದೇಹದೊಳಗಿನ ಪ್ರಾಣವು ವಾಯುವಿನಅಂಶವಾದುದರಿಂದ ಅದು ಜಗದ್ವ್ಯಾಪಿಯಾದ ವಾಯು ತತ್ತ್ವಕ್ಕೆ ಹೇಗೆ ಎದುರುನಿಲ್ಲಬಲ್ಲುದು ? ಮ ನು ಷ್ಯ ದೇ ೀ ಹ ದ ಪ್ರತಿಯೊಂದು ಅವಯವವೂ ತನ್ನ ಶಕ್ತಿಯನ್ನು ಜಗತ್ತಿನಿಂದಲೇ ಅದರೊಳಗಿನ ಅ ಖ ಂ ಡ ಶಕ್ತಿಗಳಿಂದಲೇ ವೃದ್ಧಿಪಡಿಸಿಕೊಂಡು ಜೀವಿಸಬೇಕು. ಮನುಷ್ಯನ ದೇಹದೊಳಗಿನ ಪ್ರಾಣವು ಜಗತ್ತಿನ ತುಂಬಾ ತುಂಬಿರುವ ವಾಯುವಿನೊಳಗಿನ ಎಷ್ಟು ಚಿಕ್ಕ ಅಂಶ

ವೆಂಬುದನ್ನು ಮನುಷ್ಯನ ಕಣ್ಣಿನೊಳಗಿನ ಶಕ್ತಿಯು ಸೂರ್ಯನ ಅಖಂಡ ತೇಜಸ್ಸಿನೊಳಗಿನ ಎಂತಹ ಅತ್ಯಲ್ಪಭಾಗವೆಂಬುದನ್ನು ಮನುಷ್ಯದೇಹವು ವಿಶ್ವದೊಳಗಿನ ಎಂತಹ ಚಿಕ್ಕ–ಅತ್ಯಲ್ಪ ಪ್ರಮಾಣದ್ದೆಂಬುವನ್ನು ವಿಚಾರಮಾಡಿದರೆ ಸಾಕು. ಇದು ಎಷ್ಟು ಪರಾಧೀನವೆಂಬುದು ಗೊತ್ತಾಗುವುದು. ಮರದ ಒಂದು ಸಣ್ಣ ಕೊಂಬೆಯು ಇವನ ತಲೆಯ ಮೇಲೆ ಬಿದ್ದರೂ, ಸಣ್ಣದೊಂದು ಕಲ್ಲುಬಿದ್ದರೂ ಇವನ ಅವತಾರವು ಮುಗಿದಂತೆಯೇ ಅಲ್ಲವೆ ?

ಆದುದರಿಂದ ವಿಶ್ವದ ನಿಯಮಕ್ಕೆ ಅನುಸಾರವಾಗಿಯೇ ಅದಕ್ಕೆ ವಿರೋಧವಿಲ್ಲದಂತೆಯೇ ತನ್ನ ಕರ್ಮಗಳನ್ನು ರೂಪಿಸಿ ಕೊಳ್ಳುವುದು ಮನುಷ್ಯನ ಕರ್ತವ್ಯ–ಧರ್ಮ. **"ಮತ್ಕರ್ಮಕೃತ್"** (೧೧–೫೫) ಎಂದು ಮುಂತಾಗಿ ಹೇಳುವುದು. ಇದೇ ತತ್ತ್ವ ವನ್ನು ಪುಷ್ಟೀಕರಿಸುವುದಕ್ಕಾಗಿ ಮಾತ್ರ. ಸಮುದ್ರದೊಳಗಿನ ಜಲಬಿಂದುವು ಸಮುದ್ರದ ನಿಯಮವನ್ನನುಸರಿಸಿಯೇ ಹೇಗೆ ಬದುಕಬೇಕೋ ಹಾಗೆಯೇ ಈ ಸಂಪೂರ್ಣ ವಿಶ್ವದಲ್ಲಿ ಸಮುದ್ರ ದಲ್ಲಿನ ಜಲಬಿಂದುವಿನಂತಿರುವ ಮನುಷ್ಯನು ತನ್ನ ಸಮಸ್ತ ಕರ್ಮಗಳನ್ನು ವಿಶ್ವದ ನಿಯಮಕ್ಕೆ ಅನುಕೂಲವಾಗುವಂತೆ ರೂಪಿಸಿಕೊಳ್ಳುವುದೇ ಧರ್ಮವು. ಅದಕ್ಕೆ ವಿರೋಧವಾದುದೇ ಅಧರ್ಮವು.

ಆದುದರಿಂದ ಮನುಷ್ಯನಿಗೆ ತನ್ನ ಶಕ್ತಿಯ, ಯೋಗ್ಯ ತೆಯ ಸಂಪೂರ್ಣ ಅರಿವಾಗಬೇಕೆಂಬುದೇ ಈ ಅಧ್ಯಾಯದಲ್ಲಿ ಪರಬ್ರಹ್ಮ, ಅವನ ಸ್ವಭಾವ, ಅವನ ಉದ್ಧಾರಕಕರ್ಮ, ಅಂಶ ರೂಪವಾದ ಕ್ಷರಭಾವ, ಅದಕ್ಕೆ ಅಧಿಷ್ಠಾತೃವಾದ ಪುರುಷ,

ಜೀವನರೂಪೀ ಯಜ್ಞಕ್ಕೆ ಅಧಿಷ್ಠಾತೃ, ಎಂಬ ಮುಂತಾದ ಸಂಬಂಧವು ತೋರಿಸಲ್ಪಟ್ಟಿದೆ. ಆದ ದರಿಂದ ಜಗತ್ಕಲ್ಯಾಣಕ್ಕಾಗಿಯೇ, ವಿಶ್ವವ್ಯಾಪಿಯ ನಿಯಮಕ್ಕೆ ಅನುಕೂಲವಾಗಿಯೇ ಮನುಷ್ಯನು ಕರ್ತವ್ಯಕರ್ಮವನ್ನು ನಡೆಸಬೇಕೆಂಬ ಉದ್ದೇಶ್ಯರೂಪವಾದ ಉಪದೇಶವೇ ಇಲ್ಲಿ ಹೇಳಲ್ಪಟ್ಟಿರುವುದು.

## ಮನಸ್ಸಿನ ಧರ್ಮ

ಮನಸ್ಸಿನ ಶಕ್ತಿಯು ಅತ್ಯಂತ ವಿಲಕ್ಷಣವಾದುದು. ಅದು ಯಾವುವನ್ನು ಕುರಿತು ಚಿಂತಿಸುವುದೋ ಅದೇ ಆಗಿಬಿಡುವುದು. ಮನಸ್ಸು ತದಾಕಾರವಾಗಿಯೇ ಯಾವುದಾದರೊಂದು ವಸ್ತುವಿನ ಅನುಭವವನ್ನು ಪಡೆಯಬಲ್ಲುದು. ಆದುದರಿಂದ ಯಾವುದನ್ನು ಮನಸ್ಸು ಧ್ಯಾನಮಾಡುವುದೋ ಅದನ್ನೇ ಪಡೆಯಬಲ್ಲುದು. ವೀರತ್ವದ ಧ್ಯಾನಮಾಡಿದರೆ ವೀರನಾಗುವುದು. ಕಾಮುಕತ್ವದ ಧ್ಯಾನಮಾಡಿದರೆ ಕಾಮಾಂಧನಾಗಿ ನಾಶವಾಗುವುದು. ಇದೊಂದು ಕಲ್ಪವೃಕ್ಷದಂತೆ. ಯಾವುದನ್ನಿದು ಚಿಂತಿಸಿದರೆ ಅದೇ ಫಲಿಸುವುದು. ಆದುದರಿಂದ ಇದನ್ನು ಬಹಳ ಎಚ್ಚರಿಕೆಯಿಂದ ಉಪಯೋಗಿಸಬೇಕು. ಸರಿಯಾಗಿ–ಒಳ್ಳೆಯ ರೀತಿಯಲ್ಲಿ ಉಪಯೋಗಮಾಡಿದರೆ ಒಳ್ಳೆಯದೇ ಆಗಬಲ್ಲುದು. ಇಲ್ಲದಿದ್ದರೆ ಅತಿಜಾಗ್ರತೆಯಾಗಿ ನಾಶವಾಗುವೆವು. ಪ್ರತಿಕ್ಷಣದಲ್ಲಿಯೂ ಏನನ್ನಾದರೂ ಚಿಂತಿಸುತ್ತಲೇ ಇರುವುದು ಮನಸ್ಸಿನ ಸ್ವಭಾವ. ಆದುದರಿಂದ ಇದರ ಎದುರಿಗೆ ಅತ್ಯಂತ ಶ್ರೇಷ್ಠವಾದ ಧ್ಯೇಯವನ್ನು–ಗುರಿಯನ್ನು ನಿಲ್ಲಿಸಿ ಅದನ್ನೇ ಚಿಂತನೆಮಾಡುವಂತೆ ಮಾಡಬೇಕು. ಪರಮಾತ್ಮನೇ ಎಲ್ಲಕ್ಕೂ ಶ್ರೇಷ್ಠನಾದುದರಿಂದ ಆತನನ್ನು ಕುರಿತೇ

ಚಿಂತಿಸಿ ಧ್ಯಾನಮಾಡುವುದರಿಂದ ಮನಸ್ಸು ಶ್ರೇಷ್ಠವಾಗಬೇಕೆಂಬ ಉದ್ದೇಶ್ಯದಿಂದಲೇ **ಈಶ್ವರಸ್ಮರಣೆಯೆನ್ನು** ಮನಸ್ಸಿನ ಎದುರಾಗಿ ನಿಲ್ಲಿಸಬೇಕೆಂದು ಒತ್ತಿ ಹೇಳುತ್ತಿರುವುದು

ಮನುಷ್ಯನ ಮನಸ್ಸು **"ತದ್ಭಾವ ಭಾವಿತಃ"** ಮನನದ ವಿಷಯದ ಪ್ರಭಾವದಿಂದ ಪ್ರಭಾವಿತವಾಗುವುದು

ಈ ಮನಸ್ಸೇ ಮನುಷ್ಯನ ಉನ್ನತಿಯ ಭಂಡಾರ ಉತ್ತಮ ವಿ ಷ ಯ ಗ ಳ ನ್ನು ಮನನಮಾಡುವುದರಿಂದ ಅದು ಉತ್ತಮ ಸ್ವರೂಪವನ್ನು ಹೊಂದುವುದು ನೀಚ ವಿಷಯಗಳ ಚಿಂತನೆ ಯಿಂದ ಅದು ಕೀಳು–ಅಧೋಗತಿಗೆ ಇಳಿಯುವುದು ಆದುದರಿಂದ ಮನಸ್ಸು ಯಾವಾಗಲೂ * "ಶುಭ ಸ ಂ ಕ ಲ್ಪ ವ ನ್ನು " ಮಾಡ ಬೇಕು.

‡ ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣ ಎಲ್ಲಕ್ಕೂ ಅದೇ ಮೂಲ ಆದುದರಿಂದ ಆ † ಮನಸ್ಸನ್ನು ಪ್ರಯಾಣ ಕಾಲದಲ್ಲಿ ಏಕಾಗ್ರವನ್ನಾಗಿ ಮಾಡಿ ಈ ಅಭ್ಯಾಸಯೋಗವನ್ನು ಸಾಧ್ಯಮಾಡುವುದರಿಂದ ಮನಸ್ಸು ಶುಭ ಸಂಕಲ್ಪಗಳನ್ನು ಧಾರಣೆ ಮಾಡಲು ಶಕ್ತವಾಗುವುದು ಶುಭ ಗತಿಯು ಬೇಕಾದರೆ ಶುಭ ಸಂಕಲ್ಪವನ್ನು ಮಾಡಬೇಕು. ಪ್ರಾಣ ಪ್ರಯಾಣಕಾಲದಲ್ಲಿ ಏಕಾಗ್ರಚಿತ್ತನಾಗುವುದು ಕಷ್ಟ ಅದಕ್ಕೆ ಬಹುಕಾಲದ ಹಿಂದಿ ನಿಂದಲೂ ಏಕಾಗ್ರತೆಯ ಅಭ್ಯಾಸಮಾಡಿದ್ದರೆ ಮಾತ್ರ ಅದು ಕೈ

---

* ತನ್ಮೇಮನಃ ಶಿವ ಸಂಕಲ್ಪಮಸ್ತು (ಯಜು ೩೪)

‡ ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ ।

† ಅಭ್ಯಾಸಯೋಗ ಯುಕ್ತೇನ ಚೇತಸಾ ನಾನ್ಯ ಗಾಮಿನಾ । (೮ ೮ ೮.)

ಗೂಡುವುದು. ಆ ಮ ದ ರಿ ೦ ದ ಸದಾ ಪರಮಪುರುಷನಾದ ಪರಮಾತ್ಮನನ್ನು ಚಿಂತನೆಮಾಡುವ ಅಭ್ಯಾಸವೇ ಕೊನೆಯ ಕಾಲ ದಲ್ಲಿ ಆ ಪರಮಾತ್ಮ ಭಾವವನ್ನು ಹೊಂದಿಸಿಕೊಡಬಲ್ಲುದು.

## ಪರಮಪುರುಷನು ಹೇಗಿದ್ದಾನೆ ?

ಕವಿಃ–ಸರ್ವಜ್ಞನಾಗಿದ್ದಾನೆ. ಪುರಾಣಃ–ಯಾವಾಗಲೂ ಇರುವವನು–ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಇರುವವನು. (ಪುರಾಣ–ಪುರಾ ಅಪಿ ನವಃ) ಅನುಶಾಸಿತಾ–ಎಲ್ಲವನ್ನೂ ಶಾಸನ ಮಾ ಡು ವ ವ ನು. ಅಣೋಃ ಅಣೀಯಾನ್–ಸೂಕ್ಷ್ಮಕ್ಕಿಂತಲೂ ಸೂಕ್ಷ್ಮನು. ಧಾತಾ–ಎ ಲ್ಲ ವ ನ್ನೂ ಧಾರಣೆಮಾಡುವವನು. ಅಚಿಂತ್ಯರೂಪಃ–ಮನಸ್ಸಿನಿಂದ ಚಿಂತನೆಗೆ ಸಿಕ್ಕದವನು. ಆದಿತ್ಯ ವರ್ಣಃ–ತೇಜಸ್ವಿಯು. ತಮಸಃಪರಃ–ಅಂಧಕಾರವನ್ನು ಮೀರಿ ನಿಂತಿರುವವನು.

ಇದು ಪರಮಪುರುಷನ ವರ್ಣನೆ. ಪರಮಪುರುಷನ ಈ ಗುಣಗಳನ್ನು ಚಿಂತನೆಮಾಡುವವನ ಮನಸ್ಸು ಇವುಗಳನ್ನು ಧಾರಣೆ ಮಾಡುತ್ತದೆ. ನಂತರ ಈ ಮನೋವೃತ್ತಿಯು ತದಾಕಾರ— ಪರಮಪುರುಷಾಕಾರವಾಗುತ್ತದೆ. ಅಂದರೆ ಯಾರಲ್ಲಿ ಮನಸ್ಸು ಪರಮಪುರುಷನ ಗುಣಗಳನ್ನು ಧಾರಣೆಮಾಡುತ್ತದೆಯೋ ಅದು ಪರಮಪುರುಷಾಕಾರವಾಗಿಯೇ ಆಗುತ್ತದೆ.

## ಪ್ರಯಾಣದ ಸಿದ್ಧತೆ

ಹುಟ್ಟಿದ ಮೇಲೆ ಸಾಯಲೇ ಬೇಕು. ಇದು ನಿಶ್ಚಯ. ಯಾವುದು ಉತ್ಪತ್ತಿಯಾಗುವುದೋ ಅದು ನಾಶಹೊಂದಬೇಕು.

ಈ ದೇಹವು ಮಾತೃಗರ್ಭದಿಂದ ಉತ್ಪತ್ತಿಯಾದ ನಂತರ ಸೃಷ್ಟಿ ನಿಯಮವನ್ನು ಅನುಸರಿಸಿ ವೃದ್ಧಿಹ್ರಾಸಗಳನ್ನು ಪಡೆದು ಕೆಲವು ಕಾಲ ವ್ಯವಹಾರಮಾಡಿ ನಂತರ ತನ್ನ ಉತ್ಪತ್ತಿಸ್ಥಾನವಾದ ಮಾತೃಗರ್ಭವಲ್ಲಿ–ಪ್ರಕೃತಿಯ ಮಡುಲಲ್ಲಿ ಲಯವನ್ನು ಹೊಂದಲೇ ಬೇಕು. ಇದು ಸಿದ್ಧಾಂತ. ಆದುದರಿಂದ ನಾವು ಇದಕ್ಕೆ ಅಂದರೆ ಈ ದೇಹದಿಂದ ಹೊರಹೊರಡುವುದಕ್ಕೆ ಸಿದ್ಧರಾಗಲೇ ಬೇಕು. ಸೃಷ್ಟಿಯಲ್ಲಿನ ಪ್ರತಿಯೊಂದು ಪ್ರಾಣಿಯೂ ಈ ನಿಯಮ ವನ್ನನುಸರಿಸುವುದೇ ಪ್ರಕೃತಿಯ ನಿಯಮ.

ಪ್ರಯಾಣಕಾಲವೆನ್ನುವುದು ಈ ದೇಹವನ್ನು ಬಿಟ್ಟು ದೇಹಾಭಿಮಾನಿಯಾದ ಆತ್ಮನು ಹೊರಹೊರಡುವುದು. ಅದನ್ನೇ ಮೃತ್ಯುಸಮಯ – ಮರಣಸಮಯವೆನ್ನುತ್ತಾರೆ. ಈ ಮೃತ್ಯು ಸಮಯದಲ್ಲಿ ಪರಮಪುರುಷನನ್ನು ಸ್ಮರಣೆಮಾಡುವುದರಿಂದ ಬಹಳ ಲಾಭವಿದೆ. ಮೃತ್ಯುಸಮಯದಲ್ಲಿ ಬಹುಕಾಲ ವಾಸ ಮಾಡಿದ ದೇಹದ ಸಂಬಂಧವ ಅಭಿಮಾನವನ್ನು ಬಿಡಲಾರದ ಸಂಕಟದ ಸಮಯದಲ್ಲಿ ಪರಮಪುರುಷನ ಜ್ಞಾಪಕವಿರುವುದು ಬಹಳ ಕಷ್ಟ. ಆದುದರಿಂದ ಅದನ್ನು ಸತತವೂ ಅಭ್ಯಾಸ ಮಾಡುತ್ತಿದ್ದರೆ ಮಾತ್ರ ಕೊನೆಯಕಾಲದಲ್ಲಿ ಅದು ಜ್ಞಾಪಕಕ್ಕೆ ಬರಬಹುದು. ಮನಸ್ಸು ವಿವಿಧ ಅಭಿಮಾನಗಳಿಂದ – ಸಂಕಲ್ಪ ಗಳ ಭಾರದಿಂದ ದುರ್ಬಲವಾಗಿರುವ ಆ ಸಮಯದಲ್ಲಿ ಪರಮಾತ್ಮ ಚಿಂತನೆಯನ್ನು ಏಕಾಗ್ರವಾಗಿ ನಿಲ್ಲಿಸಲು ಧೈರ್ಯವೂ ಸಾಹಸವೂ ಬೇಕು.

ಮನಸ್ಸು ಸದಾ ಏನನ್ನಾದರೂ ಚಿಂತನೆಮಾಡುತ್ತಿರುವುದರಿಂದ

ವಿಷಯಾಸಕ್ತಿಯ ಅಥವಾ ಧ್ಯಾನಕ್ಕೆ ಬದಲಾಗಿ ಉತ್ತಮ ಪುರುಷನಾದ ಪರಮಾತ್ಮನನ್ನು--ಪರಮಪುರುಷನ ಧ್ಯಾನವನ್ನು, ಅದಕ್ಕೆ ಹೊಂದಿಸಿಕೊಡುವುದಕ್ಕೆ ಚಿರಕಾಲದ ಅಭ್ಯಾಸವೇ ಬೇಕು.

## ಅಭ್ಯಾಸವು ವಿವಿಧವಾಗಿರುವುದು

ವೇದಾಭ್ಯಾಸ, ಇಂದ್ರಿಯನಿಗ್ರಹದ ಅಭ್ಯಾಸ, ವೈರಾಗ್ಯ ಧಾರಣೆಮಾಡುವ ಅಭ್ಯಾಸ, ಬ್ರಹ್ಮಚರ್ಯಪಾಲನೆಯ ಅಭ್ಯಾಸ ಈ ಎಲ್ಲ ಅಭ್ಯಾಸಗಳೂ ಪರಮ ಪ್ರಭುವಾದ ಪರಮಪುರುಷನನ್ನು -ಅವನ ಶಾಶ್ವತಸ್ಥಾನವನ್ನು ಹೊಂದುವುದಕ್ಕಾಗಿ ಅಲ್ಲವೇ ? ಮನುಷ್ಯನು ಹುಟ್ಟಿದುದರ ಪ್ರಯೋಜನವನ್ನು ಪಡೆಯುವುದಕ್ಕೆ ಪುರುಷಾರ್ಥವೆನ್ನುತ್ತಾರೆ. ಆ ಪುರುಷಾರ್ಥವು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ರೂಪವಾಗಿ ವಿಂಗಡಿಸಲ್ಪಟ್ಟಿದೆ. ಮೊದಲನೆಯ ಧರ್ಮವೂ, ಕೊನೆಯ ಮೋಕ್ಷವೂ, ತಟ್ಟನೆ ಇಂದ್ರಿಯಗೋಚರವಾಗುವುವಲ್ಲ. ಮಧ್ಯದ ಅರ್ಥ ಕಾಮಗಳು ಮಾತ್ರ ಗೋಚರವಾಗುತ್ತವೆ. ಅರ್ಥವೆಂದರೆ ಧನ. ಧನವೇ ಜಗತ್ತಿನ ಎಲ್ಲ ವ್ಯವಹಾರಕ್ಕೂ ಸಾಧಕ-ಪ್ರಯೋಜನ. ಆ ಧನದ ಸಹಾಯದಿಂದ ಬೇಕಾದ ಸುಖಗಳನ್ನು ಪಡೆದು ತೃಪ್ತಿಯನ್ನು ಅನುಭವಿಸಬಹುದು. ಸುಖದ ಕಾಮನೆಯ ಕೊನೆಯು ಸುಖದ ತೃಪ್ತಿ. ಅದು ಧನದಿಂದ ಹೊಂದಲ್ಪಡುವುದು. ಧನವು ಅದಕ್ಕೆ ಪೂರಕ. ಆದರೆ ಆ ಧನವು ಹೇಗೆ ಸಂಪಾದಿಸಲ್ಪಡಬೇಕು ? ಈ ಕಾಮನೆಯು-ಇಂದ್ರಿಯಗಳು ಕೇಳಿದುದನ್ನೆಲ್ಲಾ ಕೊಡುವುದರಿಂದ ಸಾಧ್ಯವಾಗುವುದೇ ? ಪ್ರತಿಯೊಬ್ಬನೂ ಇಂದ್ರಿಯಗಳು ಕೇಳಿದ

ಸುಖವನ್ನು ಮನಸ್ಸಿಗೆ ಕೊಡುವ ಪ್ರಯತ್ನಮಾಡುವಾಗ, ಲಗಾಮಿಲ್ಲದ ಕುದುರೆಗಳು ಆಹಾರರೂಪಪ್ರಯೋಜನಕ್ಕಾಗಿ ಒಂದರೊಡನೊಂದು ಕಚ್ಚಾಡುತ್ತಿರುವಂತೆ ಪ್ರತಿಯೊಬ್ಬನೂ ಮತ್ತೊಬ್ಬನೊಡನೆ ಸುಖಕ್ಕಾಗಿ ಹೋರಾಡುವಾಗ ವ್ಯವಹಾರವು ಅವ್ಯವಸ್ಥೆಯಾಗಿ ಸುಖವು ಯಾರಿಗೂ ಸಿಕ್ಕದೆ ಜಗತ್ತು ಅಶಾಂತಿಯಲ್ಲಿ ಮುಳುಗುವುದಾದುದರಿಂದ ಪ್ರತಿಯೊಬ್ಬನೂ ಒಂದು ನಿಯಮಿತ ರೀತಿಯಿಂದ ಸುಖವನ್ನು ತನ್ನ ಶಕ್ತಿಗೆ-ಯೋಗ್ಯತೆಗೆ ತಕ್ಕಂತೆ ಹೊಂದುವಂತೆ ಮಾಡುವ ಸಂವಿಧಾನವು ಧರ್ಮದ ನಿಯಮಕ್ಕೆ ಒಳಪಟ್ಟಿದೆ ಇಹಲೋಕದಲ್ಲಿ ಕರ್ತವ್ಯಕರ್ಮರೂಪವಾದ ಧರ್ಮದ ಅನುಸರಣೆಯಿಂದ ಮೋಕ್ಷವು ಸಿದ್ಧವಾಗುವುದು ಮೋಕ್ಷವೆನ್ನುವುದು ಸಂಸಾರದ ಸಮಸ್ತ ದುಃಖ ಸಂಕಟಗಳಿಂದ ಬಿಡಲ್ಪಟ್ಟು ಸಹಜ ಶಾಂತಿಯನ್ನು ಹೊಂದುವ ಉಪಾಯರೂಪವಾದ ಪ್ರಯೋಜನ ಈ ಮೋಕ್ಷವು ಪ್ರಯಾಣಕಾಲದಲ್ಲಿ ಪರಮಪುರುಷನಾದ ಪರಮಾತ್ಮನನ್ನು ಸ್ಮರಣೆಮಾಡುವುದರಿಂದ ಸಿದ್ಧವಾಗುವುದು

ಈಶ್ವರಸ್ಮರಣೆಯನ್ನಾವಾಗಲೂ ಮಾಡುತ್ತಿರಬೇಕು ಎಂಬುದು ಸಹಜಶಾಂತಿರೂಪಪ್ರಯೋಜನವನ್ನು ಹೊಂದುವುದಕ್ಕೆ ಸಾಧಕವಾದ ನಿಯಮ ಈಶ್ವರಸ್ಮರಣೆಯು ಮನುಷ್ಯನ ಉನ್ನತಿಯು ಹೇಗೆ ಆಗಬಲ್ಲುದು, ಎಂಬುದನ್ನು ಈಶ್ವರಸ್ಮರಣೆಯಲ್ಲಿ ಯಾವ ಯಾವ ಗುಣಗಳನ್ನು ಸ್ಮರಣೆಮಾಡಬೇಕು, ಎಂಬುದನ್ನವಲಂಬಿಸುತ್ತದೆಯಾದುದರಿಂದ ಈ ಅಧ್ಯಾಯದ ಒಂಭತ್ತನೆಯ ಶ್ಲೋಕದಲ್ಲಿ ಈಶ್ವರನ ಗುಣಗಳು ವರ್ಣಿಸಲ್ಪಟ್ಟಿವೆ ಹೇಗೆಂದರೆ,

೧ ಕವಿ–ಪರಮೇಶ್ವರನು ಸರ್ವಜ್ಞನು ಇದರಲ್ಲಿ ಪರಮಾತ್ಮಜ್ಞಾನ – ಗುಣವನ್ನು ಸ್ಮರಣೆ ಮಾಡಬೇಕಾಗುತ್ತದೆ.

ದೇವನು ಸರ್ವಜ್ಞನು. ಎಲ್ಲವನ್ನೂ ತಿಳಿದವನು. ಆದುದರಿಂದ ನಾನೂ ಸಹ ಸರ್ವಜ್ಞತ್ವದ ಗುಣವನ್ನು ಹೊಂದಬೇಕು ಎಂಬುದು ಮೊದಲನೆಯ ಸೂಚನೆಯು.

೨. "ಕವಿ" ಶಬ್ದದ ಎರಡನೆಯ ಅರ್ಥವು ಕ್ರಾಂತಿದರ್ಶಿ, ದೂರದರ್ಶಿ, ಅತೀಂದ್ರಿಯದರ್ಶಿ ಎಂದಾಗುತ್ತದೆ. ಇಂದ್ರಿಯ ಗಳು ಎಲ್ಲೆಲ್ಲಿ ಹೋಗುವುವೋ ಆ ಎಲ್ಲೆಯನ್ನು ದಾಟಿ ಅದರ ಮುಂದೆಯೂ ನೋಡಬಲ್ಲನು. ಈ ಕವಿಯ ದೃಷ್ಟಿಯು ನನಗೆ ಬರಬೇಕು ಎಂಬುದು ಎರಡನೆಯ ಸೂಚನೆಯು.

೩. ಪುರಾಣ–ಈಶ್ವರನು ಅತಿ ಪ್ರಾಚೀನನಾದರೂ ಎಲ್ಲ ಕ್ಕಿಂತಲೂ ಹಿಂದಿನವನಾದರೂ (ಪುರಾ ಅಪಿ ನವಃ) ನವೀನನೇ. ಮನುಷ್ಯನು ಈ ಶಕ್ತಿಯನ್ನು ಸಂಪಾದಿಸಬೇಕು. ಜೀ ಹ ವು ವೃದ್ಧನಾದರೂ ತರುಣನಿಗಿರುವಂತೆ ಉತ್ಸಾಹವನ್ನೂ ಕಾರ್ಯಕ್ಷಮತೆ ಯನ್ನೂ ಹೊಂದಬೇಕು. ಜ್ಞಾನವಿಚಾರ ಮತ್ತು ಕರ್ಮದಲ್ಲಿ ವೃದ್ಧನಾದರೂ ನವೀನನಂತೆಯೇ–ತರುಣನಂತೆಯೇ ಉತ್ಸಾಹ ಶೀಲನಾಗಬೇಕು. ಇದು ಮೂರನೆಯ ಸೂಚನೆಯು.

೪. ಅನುಶಾಸಿತಾ–ಈಶ್ವರನು ಎಲ್ಲರಿಗೂ ಅನುಕೂಲ ವಾದ ಹಿತಕರವಾದ ರೀತಿಯಲ್ಲಿ ಶಾಸನಮಾಡುತ್ತಾನೆ. ಎಲ್ಲ ರನ್ನೂ ಅವರವರಿಗೆ ತಕ್ಕಂತೆಯೇ ಪಾಲನೆ ಪೋಷಣೆ ಮಾಡು ತ್ತಾನೆ. ಮನುಷ್ಯನೂ ಸಹ ಇದರಂತೆಯೇ ಮನೆಯ, ಗ್ರಾಮದ [illegible]ವಾದ ರೀತಿಯಲ್ಲಿ–ಎಲ್ಲರಿಗೂ [illegible] ಯೋಗ್ಯತೆಯೊಳಗಿನ ಅಧಿಕಾರ ಇದು ನಾಲ್ಕನೆಯ ಸೂಚನೆಯು.

೫. ಸರ್ವಸ್ಯ ಧಾತಾ–ಈಶ್ವರನು ಸಮಸ್ತವನ್ನೂ ಧಾರಣೆ ಮಾಡುತ್ತಾನೆ. ಮನುಷ್ಯನೂ ಸಹ ಅದೇ ಶಕ್ತಿಯನ್ನು ಧ್ಯಾನ ಮಾಡಬೇಕು–ಸಂಪಾದಿಸಲೆತ್ನಿಸಬೇಕು. ತನ್ನ ಸಂಸಾರ, ಜಾತಿ, ದೇಶ ಮುಂತಾದ ಜನಗಳನ್ನು ತನ್ನಯೋಗ್ಯತೆಯನ್ನನುಸರಿಸಿ ಧಾರಣೆ, ಪಾಲನೆ, ಪೋಷಣೆ, ಮಾಡುವ ಶಕ್ತಿಯನ್ನು ವೃದ್ಧಿಮಾಡಿಕೊಳ್ಳ ಬೇಕು. ಇದು ಐದನೆಯ ಸೂಚನೆಯು.

೬. ಅಣೋರಣೀಯಾನ್–ಈಶ್ವರನು ಅಣುವಿನಲ್ಲಿ ಅಣು ವಾಗಿದ್ದಾನೆ. ಸೂಕ್ಷ್ಮಾತಿಸೂಕ್ಷ್ಮ ವಸ್ತುವೂ ಆತನಿಂದ ಹೊರ ಗಾಗಿಲ್ಲ. ಹಾಗೆಯೇ ಕರ್ಮಯೋಗಿಯಾದ ಸಾಧಕನು ಸೂಕ್ಷ್ಮ ಬುದ್ಧಿಯಿಂದ ವಿಚಾರಮಾಡುತ್ತಾ ಅತ್ಯಂತ ಸಣ್ಣ ಕೆಲಸವನ್ನು–ಇತರರು ತುಚ್ಛವೆಂದು ಅಸಡ್ಡೆಮಾಡುವ ಕೆಲಸವನ್ನು ಸಹಾ ಚೆನ್ನಾಗಿಮಾಡುವ ಪೂರ್ಣತೆಯನ್ನು ಅಭ್ಯಾಸಮಾಡಬೇಕು. ತನ್ನ ಆತ್ಮವು ಸೂಕ್ಷ್ಮವಾಗಿದೆ. ಸ್ಥೂಲದೇಹವು ತಾನಲ್ಲ. ಆದುದರಿಂದ ಸೂಕ್ಷ್ಮದೃಷ್ಟಿಯನ್ನು ಅಭ್ಯಾಸಮಾಡಬೇಕೆಂಬುದು ಆರನೆಯ ಸೂಚನೆಯು.

೭. ಆದಿತ್ಯವರ್ಣಃ–ಈಶ್ವರನು ಸೂರ್ಯನಂತೆ ತೇಜಸ್ವಿಯು. ಆತನ ತೇಜಸ್ಸಿಗೆ ಎದುರೇ ಇಲ್ಲ. ಸಾಧಕನೂ ತನ್ನೊಳಗೆ ತೇಜಸ್ವಿತೆಯನ್ನು ಧಾರಣೆಮಾಡಬೇಕು. ತಾನೂ ತೇಜಸ್ವಿಯಾಗಿ ಇತರರನ್ನೂ ತೇಜಸ್ವಿಗಳಾಗುವಂತೆಯೇ ಮಾಡಲೆತ್ನಿಸಬೇಕು. ಸೂರ್ಯನಂತೆ ನಿರ್ದೋಷಿಯಾಗಿ ಎಲ್ಲವನ್ನೂ ಪರಿಶುದ್ಧವಾಗುವಂತೆ ಮಾಡುವವನಾಗಿ ತಾನೂ ಪವಿತ್ರನಾಗಬೇಕು.

೮. ತಮಸಃಪರಃ–ಅಂಧಕಾರವನ್ನು ಮೀರಿದವನು–ಅದಕ್ಕೆ ಹೊರತಾದವನು. ಅಂಧಕಾರ ಅಥವಾ ತಮಸ್ಸು ತಮೋಗುಣ

ವನ್ನು ಸೂಚಿಸುತ್ತದೆ. ತಮೋಗುಣದ ಅಜ್ಞಾನ, ಆಲಸ್ಯ, ಮುಂತಾದ ಅಧೋಗತಿಯನ್ನು ಗುರ್ತಿಸುವ ಆಸುರೀಗುಣಗಳನ್ನು ದೂರೀಕರಿಸಬೇಕೆಂಬುದು ಎಂಟನೆಯ ಸೂಚನೆಯು.

೯. ಉತ್ತಮ ಪುರುಷ–ಈಶ್ವರನು ಉತ್ತಮ ಪುರುಷನು. ಸಾಧಕನೂ ಸಹ ತಾನು ಉತ್ತಮ ಪುರುಷನಾಗಬೇಕೆಂದು ಪ್ರಯತ್ನಿಸಬೇಕು ಎಂಬುದು ಒಂಬತ್ತನೆಯ ಸೂಚನೆಯು.

೧೦. ಅಚಿಂತ್ಯರೂಪ–ಈಶ್ವರನು ಅಚಿಂತ್ಯ ರೂಪನು. ಕರ್ಮಯೋಗಿಯೂ ಸಹಾ ತನ್ನ ಕೆಲಸಗಳ ಆದಿಅಂತ್ಯಗಳನ್ನು ತಿಳಿಯಲು ಆಶ್ಚರ್ಯಪಡುವಂತಹ ಶ್ರೇಷ್ಠಕಾರ್ಯಗಳನ್ನೇ ಮಾಡಲು ಯತ್ನಿಸಬೇಕು. ಅದ್ಭುತಕುಶಲತೆಯಿಂದ ಅಚಿಂತನೀಯ ಕಾರ್ಯ ರೂಪನಾಗಬೇಕು. ಇದು ಹತ್ತನೆಯ ಸೂಚನೆಯು.

ಹೀಗೆ ಪರಮಾತ್ಮನ ಗುಣಗಳ ಸ್ಮರಣೆಯನ್ನೂ ಮನನ ವನ್ನೂ ಮಾಡಬೇಕೆಂದು ಮೇಲಿನ ಸೂಚನೆಯು ತಿಳಿಸುತ್ತದೆ. ಇವುಗಳನ್ನು ಮನುಷ್ಯನು ತನ್ನ ನಿತ್ಯ ಜೀವನದಲ್ಲಿಯೂ ಆಚರಣೆಗೆ ತರುವುದರಿಂದ ಬೇಕಾದಷ್ಟು ಲಾಭವಿದೆ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ, ಒಂದು ದೇಶದಿಂದ ಮತ್ತೊಂದು ದೇಶಕ್ಕೆ, ಪ್ರಯಾಣಮಾಡುವಾಗಲೂ ಸಹ ಈ ಗುಣಗಳ ಸ್ಮರಣೆಯೂ, ಮನನವೂ ತಕ್ಕಷ್ಟು ಉಪಯೋಗಕರವಾಗಿಯೇ ಆಗುವುವು.

ಆದುದರಿಂದ ಒಟ್ಟಿನಲ್ಲಿ ಮನುಷ್ಯನು ತನ್ನ ಮನಸ್ಸನ್ನು ಈಶ್ವರನ ಶುಭಗುಣಗಳಿಂದ ತುಂಬಬೇಕು. ಜ್ಞಾನ–ದೂರದೃಷ್ಟಿ, ಪ್ರಾಚೀನ ಮತ್ತು ನವೀನಗಳ ಸಂಗಮ, ಶಾಸನ ಸಾಮರ್ಥ್ಯ, ಧಾರಣಪೋಷಣ, ಸೂಕ್ಷ್ಮವಿಚಾರ, ತೇಜಸ್ವಿತೆ, ತಮೋಗುಣ

ದಿಂದ ದೂರವಾಗಿರುವಿಕೆ, ಉತ್ತಮಪುರುಷನಾಗುವಿಕೆ, ಕುಶಲತೆ ಈ ಹತ್ತೂ ದೈವೀಗುಣಗಳು. ಇವುಗಳನ್ನು ಮನನ ಮಾಡಿ ತನ್ನೊಳಗೆ ಧಾರಣೆಮಾಡುವುದರಿಂದ ತನ್ನ ನಿತ್ಯ ಜೀವನದಲ್ಲಿ ಈಶ್ವರೀ ಗುಣಗಳಿಂದ ತನ್ನನ್ನು ಪರಿಪೂರ್ಣನನ್ನಾಗಿ ಮಾಡಿಕೊಳ್ಳಬೇಕು. ನಮ್ಮ ಧರ್ಮಗಳಲ್ಲಿ ವರ್ಣಿಸಲ್ಪಟ್ಟ ದೈವೀಗುಣಗಳು ಇಹಕ್ಕೂ ಪರಕ್ಕೂ ಸಾಧಕಗಳಾಗಿಯೇ ಇವೆ. ಆದುದರಿಂದ ಮೇಲೆ ಹೇಳಲ್ಪಟ್ಟ ಈಶ್ವರೀ ಗುಣಗಳನ್ನು ತನ್ನ ಜೀವನದಲ್ಲಿ ಆಚರಣೆಗೆ ತರುವುದರಿಂದ ಈಶ್ವರನ ಸ್ಮರಣೆಯೂ ಸತತವಾಗಿ ನಡೆದು ಪುಣ್ಯಗತಿಯೂ ಪ್ರಾಪ್ತವಾಗುತ್ತದೆ. ಮರಣಕಾಲದಲ್ಲಿ ಯಾವದೂ ಈ ರೀತಿ ಈಶ್ವರನ ಸ್ಮರಣೆಯು ಬಂದರೆ ಸದ್ಗತಿಯು ಪ್ರಾಪ್ತವಾಗುವುದು.

## ಈಶ್ವರ ದರ್ಶನ

ಭಗವದ್ಗೀತೆಯಲ್ಲಿ ಕರ್ಮಯೋಗವನ್ನು ಹೇಳುವಾಗ ಅಲ್ಲಲ್ಲಿ ನನ್ನನ್ನು ಸ್ಮರಣೆಮಾಡುತ್ತಾ ಯುದ್ಧಮಾಡು ಎಂಬುದನ್ನು ಒತ್ತಿ ಹೇಳುತ್ತಾರೆ. ಈಶ್ವರಸ್ಮರಣೆಯೊಡನೆಯೇ ಕರ್ಮಗಳು ನಡೆಯುತ್ತಾ ಹೋಗಬೇಕು ಎಂಬುದು ಇದರರ್ಥ. ಮನಸ್ಸು ಹಿಂದೆ ನೋಡಿದ ಅನುಭವಿಸಿದ ವಸ್ತುವನ್ನು ಸ್ಮರಣೆ ಮಾತ್ರ ಮಾಡಬಲ್ಲುದು. ಎಂದೂ ನೋಡದಿರುವ ವಸ್ತುವನ್ನು ಸ್ಮರಣೆಮಾಡುವುದು ಹೇಗೆ? ಪರಮಾತ್ಮನು ಇಂದ್ರಿಯಗೋಚರನಲ್ಲ. ಮನಸ್ಸಿನಿಂದ ಚಿಂತಿಸಲು ಅಸಾಧ್ಯ. ಏಕೆಂದರೆ ಅದಕ್ಕಿಂತಲೂ ದೂರನು. (ವಾಙ್ಮನೋತೀತನು) ಅವನನ್ನು ನೋಡದೆ ಸ್ಮರಣೆಮಾಡುವುದು ಸಾಧ್ಯವಿಲ್ಲ. ಬಲವಂತವಾಗಿ ಇತರರ ಹೇಳಿಕೆಯಂತೆ ಕೇಳಿದುದನ್ನು ನಂಬಿ

ಸ್ಮರಣೆಮಾಡುವುದರಲ್ಲಿ ಪ್ರೇಮವೂ ಇರುವುದಿಲ್ಲ. ಹಾಗಾದರೆ ಸ್ಮರಣೆಮಾಡುವುದು ಹೇಗೆ? ಏಳನೆಯ ಅಧ್ಯಾಯದಲ್ಲಿ ಸೂಚಿಸಿದಂತೆ ನಮ್ಮ ದೃಷ್ಟಿಯನ್ನು ದಿವ್ಯವಾಗಿ ಮಾಡಬೇಕು. ಕ್ಷರ, ಅಕ್ಷರ, ಪುರುಷೋತ್ತಮ ಈ ಸ್ವರೂಪಗಳನ್ನು ವಿಚಾರಮಾಡಲಾರಂಭಿಸಿದಾಗ ಕ್ಷರ ಎಂಬ ಪಾಂಚಭೌತಿಕ ಪ್ರಪಂಚದ ಹೊರಗಿನ ರೂಪವು ಕ್ಷಣ ಕ್ಷಣಕ್ಕೂ ರೂಪ ಬದಲಾಯಿಸುತ್ತಿರುವುದು. ನಾಶಕ್ಕೆಡೆಯಾಗಿರುವುದು. ಅದರೊಳಗೆ ಜೀವಭೂತವಾಗಿರುವವನು ಅಕ್ಷರನು. ಈ ಎರಡೂ ರಥದ ಚಕ್ರಗಳಂತೆ. ಕ್ಷರಾಕ್ಷರ ರೂಪ ಜಗತ್ತೆಲ್ಲಾ ಇಡೀ ಪುರುಷೋತ್ತಮ ಎಂಬ ತತ್ತ್ವವು ಅರಿವಾದರೆ ಎಲ್ಲಿ ಯಾವ ವಸ್ತುವನ್ನು ನೋಡಿದರೂ ಈಶ್ವರನ ದರ್ಶನಮಾಡಿದಂತೆ ಅನುಭವ ಬರುವುದು. ಪಾಂಚಭೌತಿಕ ಜಗತ್ತಿನಲ್ಲಿ ಕಾಣಬರುವುದೆಲ್ಲಾ ತನ್ನ ದೇವನರೂಪವೇ ಎಂಬ ಅರಿವಾಗಲಾರಂಭಿಸಿದಾಗ ಸ್ಮರಣೆಮಾಡುತ್ತಾ ಕರ್ಮಮಾಡುವುದು ಕಷ್ಟವಾಗುವುದಿಲ್ಲ. ಆಗ ನಮ್ಮ ಕಣ್ಣೆದುರಿಗೆ ವಿಶ್ವರೂಪವೇ ಎದುರು ನಿಂತಂತಾಗುವುದು. ಜಗತ್ತಿನ ರೂಪವು—ಕ್ಷರ ರೂಪವು. ನಾಶಕ್ಕೆಡೆಯಾಗಿರುವುದಾದರೂ ಅದು ಅಖಂಡವೇ. ಸೃಷ್ಟಿಯು ನಾಶಕ್ಕೆಡೆಯಾಗಿ ಕಾಣಬಹುದು. ಅದರೊಳಗಿನ ಅಕ್ಷರವು ಅಖಂಡ, ಅವಿನಾಶಿ. ಹಾಗೆಯೇ ಅದರ ಸಂಪೂರ್ಣರೂಪವು ಪುರುಷೋತ್ತಮ. ಆ ಪುರುಷೋತ್ತಮನೇ ಎಲ್ಲೆಲ್ಲಿಯೂ ಎಲ್ಲ ರೂಪಗಳಲ್ಲಿಯೂ ಅಖಂಡವಾಗಿ ಅಧಿಕಾರಮಾಡುತ್ತಿರುವುದು.

ಕ್ಷರಸೃಷ್ಟಿಯು ದೇಶ ಕಾಲಗಳ ಪರಿಮಿತಿಗೆ ಒಳಪಟ್ಟಿದೆ. ದೇಶ ಎಂದರೆ ಸ್ಥಳ. ಪಾತಾಳದ ಕೊನೆಯಿಂದ ಸತ್ಯಲೋಕದ ಶಿಖರದವರೆಗೆ ಏನೇನಿರುವುದೋ ಅದೆಲ್ಲಾ ದೇಶ. ಪೃಥ್ವಿಯಿಂದ

ಆಕಾಶದ ಕೊನೆಯವರೆಗೆ ಪಂಚಭೂತಗಳು ಒಂದರೊಳಗೊಂದು ಬೆರಿಕೆಯಾಗಿ ವಿವಿಧ ನಾಮರೂಪಗಳಾಗಿ ತೋರುತ್ತಿರುವುದೆಲ್ಲಾ ದೇಶದ ನಿಯಮಕ್ಕೆ ಒಳಪಟ್ಟಿದೆ. ಇದೆಲ್ಲವೂ ಅ ಖ ಂ ಡ ವೇ. ವಿಶ್ವಾತ್ಮನ ವಿಶ್ವರೂಪವೇ. ಈ ವಿಶ್ವದಲ್ಲಿ ಎಲ್ಲೆಲ್ಲಿ ಯಾವು ಯಾವುದು ಕಾಣ ಬರುವುದೋ ಅದೆಲ್ಲವೂ ಕ್ಷರಾಕ್ಷರ ರೂಪ ಯುಕ್ತ ಪುರುಷೋತ್ತಮನೆ.

ಕಾಲವು ಅನಂತ. ಕಲ್ಪನಾತೀತ. ಅದೂ ಅಖಂಡವೇ. ಆದರೂ ವಿಷಯ ವಿಮರ್ಶೆಗಾಗಿ ಋಷಿಗಳು ಅದನ್ನು ಕಲಾ, ಕಾಷ್ಠಾ, ಮುಹೂರ್ತ, ದಿನ, ಮಾಸ, ವರ್ಷ, ಯುಗರೂಪ ವಾಗಿ ವಿಭಾಗಮಾಡಿದ್ದಾರೆ. ಕೃತ, ತ್ರೇತ, ದ್ವಾಪರ, ಕಲಿ ಎಂಬುವು ನಾಲ್ಕು ಯುಗಗಳು. ಮನುಷ್ಯನ ಒಂದು ವರ್ಷವು ದೇವತೆಗಳ ಒಂದು ದಿನ. ಅಂತಹ ದಿನಗಳು ೩೬೦ ಆದರೆ ಒಂದು ದೇವ ವರ್ಷ. ಅಂತಹ ಸಾವಿರ ವರ್ಷಗಳು ಕಲಿ. ೨೦೦೦ ವರ್ಷ ದ್ವಾಪರ. ೩೦೦೦ ವರ್ಷ ತ್ರೇತಾ. ೪೦೦೦ ವರ್ಷ ಕೃತ. ಹೀಗೆ ನಾಲ್ಕು ಯುಗಗಳ ಒಂದು ಗುಂಪು ಚತುರ್ಯುಗ. ಇವಕ್ಕೆ ಕೃತ ೪೦೦, ತ್ರೇತಾ ೩೦೦, ದ್ವಾಪರ ೨೦೦, ಕಲಿ ೧೦೦ ಹೀಗೆ ಸಂಧಿವರ್ಷಗಳು ಸೇ ರು ತ್ತ ವೆ. ಇಂತಹ ಒಂದು ಸಾವಿರ ಚತುರ್ಯುಗಗಳು ಬ್ರಹ್ಮನಿಗೆ ಒಂದು ಹಗಲು. ಸಾವಿರ ಚತುರ್ಯುಗಗಳು ರಾತ್ರಿ. ಇಂತಹ ೩೬೦ ದಿನಗಳು ಸೇರಿ ಆಗುವುದು ವರ್ಷ. ಇಂತಹ ಒಂದು ನೂರು ವರ್ಷಗಳು ಸೃಷ್ಟಿಕರ್ತನಾದ ಚತುರ್ಮುಖ ಬ್ರ ಹ್ಮ ನ ಆಯುಸ್ಸು. ಸೃಷ್ಟಿಯ ಆದಿಯಿಂದ ಇದುವರೆಗಿನ ಕಾಲಮಾನ ದಲ್ಲಿ ನಾವಿರುವುದು ಇಪ್ಪತ್ತೆಂಟನೇ ಚತುರ್ಯುಗದ ಕೊನೆಯ

ಕಲಿಯುಗ. ಒಂದು ದೇವ ವರ್ಷದಲ್ಲಿ ಅಲ್ಪವಾದ ಆಯುಸ್ಸುಳ್ಳ ಮನುಷ್ಯಪ್ರಾಣಿಯು ಎಷ್ಟು ಸಾರ್ತಿ ಹುಟ್ಟಿಬರುತ್ತಾನೆ? ಬ್ರಹ್ಮನ ಒಂದು ದಿನದಲ್ಲಿ ಎಷ್ಟು ಸಾರ್ತಿ ಜನ್ಮ ಮರಣ ಚಕ್ರದಲ್ಲಿ ಸುತ್ತಿ ಬರಬೇಕಾಗುತ್ತದೆ? ಸೃಷ್ಟಿಕರ್ತ ಬ್ರಹ್ಮನ ಆಯುಸ್ಸಿನಲ್ಲಿ ನಾವು ಎಷ್ಟು ಸಾರ್ತಿ ಹುಟ್ಟಿಬಂದಿರಬಹುದು? ಮುಂದೆ ಎಷ್ಟು ಜನ್ಮಗಳು ನಮ್ಮನ್ನು ಕಾಯುತ್ತಾ ಕುಳಿತಿವೆ—ಎಂದು ಮುಂತಾಗಿ ವಿಚಾರಮಾಡಲಾರಂಭಿಸಿದರೆ ವಿಶಾಲವಾದೀ ಸೃಷ್ಟಿಯಲ್ಲಿ ಮನುಷ್ಯನ ಸ್ಥಾನವು ಮಹಾಜಲರಾಶಿಯಾದ ಸಾಗರದಲ್ಲಿನ ಒಂದು ಬಿಂದು ಜಲಕ್ಕೂ ಹೋಲುವುದಿಲ್ಲವಲ್ಲವೆ? ನಮ್ಮ ಶಕ್ತಿಯು ವಿಶ್ವಾತ್ಮನ ವಿಶ್ವಸೃಷ್ಟಿಯ ಶಕ್ತಿಯಲ್ಲಿ ತಿಲಮಾತ್ರವೂ ಇಲ್ಲವೆಂಬುದು ಗೊತ್ತಾಗುವುದಿಲ್ಲವೆ? ಮನುಷ್ಯನು ತನ್ನ ಈ ಅತ್ಯಲ್ಪ ಸ್ಥಾನವನ್ನು ಮರೆತು ತಾನೇ ದೊಡ್ಡವನೆಂದೂ, ವಿವೇಕಿಯೆಂದೂ, ಶಕ್ತಿಶಾಲಿಯೆಂದೂ ಗರ್ವಪಡುವುದು ಅವಿವೇಕ. ಮೂರ್ಖತನ. ಆದುದರಿಂದ ಮನುಷ್ಯನ ಕರ್ತವ್ಯವು ಅಹಂಕಾರವನ್ನು ಬಿಟ್ಟು ಎಲ್ಲೆಲ್ಲಿಯೂ ಎಲ್ಲಕಾಲಗಳಲ್ಲಿಯೂ ಜಗದ್ರೂಪನಾಗಿ ವಿಹರಿಸುತ್ತಿರುವ ಜಗದೀಶನ ಸೃಷ್ಟಿ ನಿಯಮಕ್ಕೆ ಅನುಸರಿಸಿ ತನ್ನ ಸಮಸ್ತ ಸಂಕಲ್ಪಗಳನ್ನೂ ಅಳವಡಿಸಿ ಸಂಪೂರ್ಣ ನಿರಭಿಮಾನದಿಂದ ಶರಣಾಗತಿ ಯೋಗದಿಂದ ಭಗವತ್ಸೇವೆ ಮಾಡುವುದೇ ಸರಿಯಾದ ಮಾರ್ಗ.

* **ಮರಣೋತ್ತರ ಸಮಸ್ಯೆ:**—ಮನುಷ್ಯನ ಪ್ರಯಾಣವು ಎರಡು ಮಾರ್ಗಗಳಲ್ಲಿ. ಒಂದು ಶುದ್ಧ ಮಾರ್ಗ. ಮತ್ತೊಂದು ಕೃಷ್ಣ ಮಾರ್ಗ.

---

* ಶುಕ್ಲ ಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ। (೮–೨೬)

ಈ ಶುದ್ಧ ಕೃಷ್ಣಮಾರ್ಗಗಳು ಈ ಜಗತ್ತಿನಲ್ಲಿ ಶಾಶ್ವತ ವಾಗಿ ಕಾಲನಿಂದ ನಡೆದುಕೊಂಡುಬಂದಿವೆ. ಕೆಲವರು ಶುದ್ಧ ಮಾರ್ಗದಿಂದ ಹೊರಡುತ್ತಾರೆ. ಮತ್ತೆ ಕೆಲವರು ಕೃಷ್ಣಮಾರ್ಗ ದಿಂದ ಪ್ರಯಾಣಮಾಡುತ್ತಾರೆ. ಇವುಗಳನ್ನು ಪುಣ್ಯಮಾರ್ಗ, ಪಾಪಮಾರ್ಗ ಎಂದು ಹೇಳುತ್ತಾರೆ. ಪುಣ್ಯಮಾರ್ಗವು ಶುದ್ಧ ಮಾರ್ಗ. ಪಾಪಮಾರ್ಗವು ಅಶುದ್ಧ. ತಾಮಸೀಮಯವು ಕೃಷ್ಣ ಮಾರ್ಗವು. ಪುಣ್ಯಮಾರ್ಗದಿಂದ (ಅನಾವೃತ್ತಿ) ಪುನಃ ಸಂಸಾರ ಚಕ್ರಕ್ಕೆ ಸಿಕ್ಕಿ ಜನ್ಮಕ್ಕೆ ಬರದಿರುವ ಸ್ಥಿತಿಯೂ, ಎರಡನೆಯ ಅಶುದ್ಧ ಮಾರ್ಗದಿಂದ (ಪುನಃ ಆವರ್ತತೆ) ಜನ್ಮಕ್ಕೆ ತಿರುಗಿ ಬರುವ ಸ್ಥಿತಿ ಅಂದರೆ ಪುನಃ ಪುನಃ ಸಂಸಾರ ಚಕ್ರದಲ್ಲಿ ತಿರುಗುವ ಸ್ಥಿತಿಯೂ ಪ್ರಾಪ್ತವಾಗುತ್ತವೆ.

ಮನುಷ್ಯನು ಸತ್ತನಂತರ ಏನಾಗುತ್ತಾನೆ ? ಎಲ್ಲಿಗೆ ಹೋಗು ತ್ತಾನೆ ? ಎಂಬ ಸಮಸ್ಯೆಯು ಬಹುಜನಗಳನ್ನು ಕಾಡಿಸುತ್ತಿದೆ. ಈ ಸಮಸ್ಯೆಯನ್ನು ಬಿಡಿಸಲು ಅನೇಕರು ಅನೇಕ ವಿಧದಲ್ಲಿ ಪ್ರಯತ್ನಿಸಿದ್ದಾರೆ. ಗೀತಾಚಾರ್ಯನು ಇದನ್ನು ಬಹು ಸುಲಭವಾಗಿ ಬೋಧಪ್ರದವಾಗಿ ಬಿಡಿಸಿದ್ದಾನೆ.

ಶುಕ್ಲ ಕೃಷ್ಣ ಎಂಬ ಎರಡು ಮಾರ್ಗಗಳನ್ನು ವರ್ಣಿಸು ವಾಗ ಚಾಂದ್ರಮಾನದ ತಿಂಗಳಿನ ಶುಕ್ಲಪಕ್ಷ ಕೃಷ್ಣಪಕ್ಷ ಅಥವಾ ಸೂರ್ಯನ ಉತ್ತರಾಯಣ ದಕ್ಷಿಣಾಯನ ಎಂದು ಮಾತ್ರ ತಿಳಿಯು

ಶುದ್ಧಮಾರ್ಗದಲ್ಲಿ ನಡೆಯುವವನು ತನ್ನ ಜೀವನದಲ್ಲಿ ಸರಳ ವಾದ, ಶಾಸ್ತ್ರಸಮ್ಮತವಾದ, ಲೋಕ ಸೇವಾರೂಪವಾದ ಪುಣ್ಯ ಮಾರ್ಗವನ್ನನುಸರಿಸುವವನು ಉತ್ತಮಗತಿಯನ್ನು ಹೊಂದುತ್ತಾನೆ ಅದಿಲ್ಲದೆ ಕುಟಿಲ-ಕಪಟ ಮಾರ್ಗವನ್ನನುಸರಿಸುವವನು ನೀಚಗತಿ ಯನ್ನು ಹೊಂದುತ್ತಾನೆ ಹದಿನಾರನೆಯ ಅಧ್ಯಾಯದಲ್ಲಿ ಮನುಷ್ಯ ಸ್ವಭಾವವನ್ನು ದೈವೀ ಅಸುರೀ ಎಂದು ಎರಡು ವಿಭಾಗಮಾಡಿ ದೈವೀ ಗುಣಗಳನ್ನು ಹೊಂದಿದವನು ಮೋಕ್ಷಮಾರ್ಗವನ್ನು ಹಿಡಿಯುತ್ತಾನೆ ಎಂದೂ, ಆಸುರೀ ಗುಣಗಳನ್ನು ಹೊಂದಿದವನು ಸಂಸಾರ ಮೋಹರೂಪ ಪಾಶದಲ್ಲಿ ಸಿಕ್ಕಿಬೀಳುವನೆಂದೂ ಸ್ಪಷ್ಟ ವಾಗಿ ತಿಳಿಸಿದ್ದಾರೆ ದೈವೀ ಗುಣಗಳಿಗೂ, ಆಸುರೀ ಗುಣಗಳಿಗೂ ಅಂತಃಕರಣದಲ್ಲಿ ಸದಾ ಯುದ್ಧವಾಗುತ್ತಲೇ ಇರುವುದರಿಂದ ಬುದ್ಧಿಯ ಸಹಾಯದಿಂದ ಯುಕ್ತಾಯುಕ್ತ ವಿವೇಚನೆಮಾಡಿ ಧೈರ್ಯದಿಂದ ಆಸುರೀ ಗುಣಗಳನ್ನು ತುಳಿದು ದೈವೀ ಸಂಪತ್ತನ್ನು ಹೆಚ್ಚಿಸಿಕೊಂಡರೆ ಮರಣಾನಂತರದ ಗತಿಯು-ಮಾರ್ಗವು ಶುದ್ಧ ವಾಗುವುದು ಅದಿಲ್ಲದಿದ್ದರೆ ಅಶುದ್ಧವಾಗುವುದು ಶುದ್ಧಮಾರ್ಗ ದಲ್ಲಿ ನಡೆಯುವವನು ತನ್ನ ಧ್ಯೇಯಸ್ಥಾನವನ್ನು ತಲಪಬಲ್ಲ. ಅಶುದ್ಧ-ಕೃಷ್ಣಮಾರ್ಗದಲ್ಲಿ ನಡೆಯುವವನು ಕೆಲವುಕಾಲ ಸುತ್ತಿ ತಿರುಗಿ ಪುನಃ ಹಿಂದಕ್ಕೇ *ಬರಬೇಕಾಗುತ್ತದೆ.

---

*ಪ್ರಕಾಶಮಯವಾದ ಬೆಳಕಿಗೆ ಅಭಿಮಾನಿಯಾದ ದೇವತೆಯೂ, ಹಗಲಿಗೆ ಅಭಿಮಾನಿಯಾದ ದೇವತೆಯೂ, ಶುಕ್ಲಪಕ್ಷಕ್ಕೆ ಅಭಿಮಾನಿ ಯಾದ ದೇವತೆಯೂ, ಉತ್ತರಾಯಣದ ಆರುತಿಂಗಳಿಗೆ ಅಭಿಮಾನಿ ಯಾದ ದೇವತೆಯೂ ಇರುವ, ಉತ್ತರ ಮಾರ್ಗದಲ್ಲಿ ಪ್ರಯಾಣ ಮಾಡುವ ಸಗುಣ ಬ್ರಹ್ಮೋಪಾಸನೆಮಾಡಿದ ಯೋಗಿಗಳು ಆಯಾ

ಈ ವಿಷಯದಲ್ಲಿ ಬೃಹದಾರಣ್ಯಕ, ಛಾಂದೋಗ್ಯ, ಕಠ ಮುಂತಾದ ಉಪನಿಷತ್ತುಗಳ ಅಭಿಪ್ರಾಯ ಸರಣಿಯನ್ನು ವಾಚಕರ ಅವಗಾಹನೆಗೆ ಕೊಡುತ್ತಿದ್ದೇವೆ.

**ಯೇ...... ಶ್ರದ್ಧಾಂ ಸತ್ಯಮುಪಾಸತೇ ತೇ ಅರ್ಚಿರಭಿ ಸಂಭವಂತಿ ಅರ್ಚಿಷೋ ಅಹಃ ಅಹ್ನ ಆಪೂರ್ಯಮಾಣಪಕ್ಷಂ; ಆಪೂರ್ಯಮಾಣ ಪಕ್ಷಾತ್ ಯಾನ್ ಷಣ್ಮಾಸಾನುದಙಾದಿತ್ಯ ಏತಿ ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಂ ಆದಿತ್ಯಾದ್ವೈದ್ಯುತಂ ತಾನ್ ವೈದ್ಯುತಾನ್ ಪುರುಷೋ ಮಾನುಷ ಏತ್ಯ ಬ್ರಹ್ಮಲೋಕಾನ್ ಗಮಯತಿ, ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸಂತಿ ತೇಷಾಂ ನ ಪುನರಾವೃತ್ತಿಃ ॥ ೧೫ ॥**

**ಯೇ.........ಯಜ್ಞೇನ... ...ಲೋಕಾನ್ ಜಯಂತಿ ತೇ ಧೂಮಮಭಿ ಸಂಭವಂತಿ, ಧೂಮಾದ್ರಾತ್ರಿಂ, ರಾತ್ರೇರ**

---

ದೇವತೆಗಳ ಮೂಲಕ ಪ್ರಯಾಣಮಾಡಿ ಪರಬ್ರಹ್ಮನನ್ನು ಹೋಗಿ ಸೇರುತ್ತಾರೆ.

ಧೂಮಕ್ಕೆ-ಸಂಜೆಗೆ ಅಭಿಮಾನಿಯಾದ ದೇವತೆಯೂ, ರಾತ್ರಿಗೆ ಅಭಿಮಾನಿಯಾದ ದೇವತೆಯೂ, ಕೃಷ್ಣಪಕ್ಷಕ್ಕೆ ಅಭಿಮಾನಿಯಾದ ದೇವತೆಯೂ, ದಕ್ಷಿಣಾಯನದ ಆರು ತಿಂಗಳಿಗೆ ಅಭಿಮಾನಿಯಾದ ದೇವತೆಯೂ ಇರುವ ಆ ದಕ್ಷಿಣಮಾರ್ಗದಲ್ಲಿ ಪ್ರಯಾಣಮಾಡಿದ ಸಕಾಮಕರ್ಮಿಯಾದ ಯೋಗಿಯು ಮೇಲೆ ಹೇಳಲ್ಪಟ್ಟ ದೇವತೆಗಳ ಮೂಲಕ ಚಂದ್ರಸಂಬಂಧವಾದ ತೇಜಸ್ಸುಳ್ಳ ಲೋಕವನ್ನು ಹೊಂದಿ ಅಲ್ಲಿ ಬೇಕಾದ ಸ್ವರ್ಗಸುಖವನ್ನು ಅನುಭವಿಸಿ ಜನ್ಮಕ್ಕೆ ಹಿಂದಿರುಗುತ್ತಾನೆ. ಇದು ಸಾಮಾನ್ಯ ನಿಯಮ.

**ಪಕ್ಷೀಯ ಮಾಣಪಕ್ಷಂ, ಅಪಕ್ಷೀಯಮಾಣ ಪಕ್ಷಾತ್ ಷಣ್ಮಾಸಾ೯ ವಕ್ಷಿಣಾದಿತ್ಯ ಏತಿ ಮಾಸೇಭ್ಯಃ ಪಿತೃಲೋಕಂ, ಪಿತೃಲೋಕಾ ಚ್ಚಂದ್ರಂ, ತೇ ಚಂದ್ರಂಪ್ರಾಪ್ಯ ಅನ್ನಂಭವಂತಿ, ತಾ ಸ್ತತ್ರ ದೇವಾ ಭಕ್ಷಯಂತಿ ಆಕಾಶಾದ್ವಾಯುಂ, ವಾಯೋರ್ವೃಷ್ಟಿಂ ವೃಷ್ಟೇಃ ಪೃಥಿವೀಂ, ಪೃಥಿವೀಂ ಪ್ರಾಪ್ಯ ಅನ್ನಂಭವಂತಿ, ತೇ ಪುನಃ ಪುರುಷಾಗ್ನೌಹೂಯಂತಿ, ತತೋಯೋಷಾಗ್ನೌಜಾಯಂತೆ ಲೋಕಾ೯ ಪ್ರತ್ಯುತ್ಥಾಯಿನಸ್ತ ಏವಮೇವಾನು ಪರಿವರ್ತಂತೆ ಅಥಯ ಏತೌ ಪಂಥಾನೌ ನವಿದುಸ್ತೇ ಕೀಟಾಃ ಪತಂಗಾ ಯಿದಿದಂ ದಂದಶೂಕಂ ||೧೬||** (ಬೃ ೬-೨. ೧೫-೧೬)

ಯಾರು ಶ್ರದ್ಧಾ ಮತ್ತು ಸತ್ಯದ ಉಪಾಸನೆಮಾಡು ತ್ತಾರೆಯೋ ಅವರು (ಅರ್ಚಿಃ) ಪ್ರಕಾಶವನ್ನು ಹೊಂದುತ್ತಾರೆ. ಅಲ್ಲಿಂದ ಹಗಲು ಹಗಲಿನಿಂದ (ಆಪೂರ್ಯಮಾಣ ಪಕ್ಷಂ) ಪೂರ್ಣ ಪಕ್ಷವನ್ನು ಅಲ್ಲಿಂದ ಉತ್ತರದಿಕ್ಕಿನಲ್ಲಿ ಸೂರ್ಯನು ಸಂಚರಿಸುವ ಆರು ತಿಂಗಳುಗಳನ್ನು ಆ ಉತ್ತರಾಯಣದಿಂದ ಸಂವತ್ಸರವನ್ನು (ದೇವಲೋಕವನ್ನು) ಅಲ್ಲಿಂದ ಆದಿತ್ಯನನ್ನು, ಆದಿತ್ಯನಿಂದ ಚಂದ್ರಮನನ್ನು, ಚಂದ್ರಮನಿಂದ ವಿದ್ಯುತ್ತನ್ನೂ ಹೊಂದುತ್ತಾರೆ. ಅಲ್ಲಿಂದಮುಂದೆ ಮಾನಸಪುರುಷನೊಡನೆ ಹೊರಟು ಬ್ರಹ್ಮಲೋಕ ವನ್ನುಹೊಂದುತ್ತಾರೆ. ಅಲ್ಲಿ ಅನಂತ ಕಾಲದವರೆಗೂ ಇರುತ್ತಾರೆ. ಅಲ್ಲಿಂದ ಹಿಂದಿರುಗುವುದಿಲ್ಲ.

ಎರಡನೆಯ ಮಾರ್ಗವು-ಯಜ್ಞದಿಂದ ಅನೇಕ ಲೋಕ ಗಳನ್ನು ಜಯಿಸುತ್ತಾರೆ. ಅವರು ಧೂಮವನ್ನು ಹೊಂದುತ್ತಾರೆ. ಧೂಮದಿಂದ ರಾತ್ರಿ ರಾತ್ರಿಯಿಂದ ಕ್ಷಯ ಪಕ್ಷ. ಅಲ್ಲಿಂದ ಸೂರ್ಯನು ದಕ್ಷಿಣಕ್ಕೆ ತಿರುಗುವ ಆರು ತಿಂಗಳುಗಳು. ಅಲ್ಲಿಂದ

ಪಿತೃಲೋಕ. ಅಲ್ಲಿಂದ ಚಂದ್ರನನ್ನು ಹೊಂದಿ ಅನ್ನರೂಪವಾಗುತ್ತಾರೆ. ಆ ಅನ್ನವನ್ನು ದೇವತೆಗಳು ಭಕ್ಷಣೆಮಾಡುತ್ತಾರೆ. ಅಲ್ಲಿಂದ ಆಕಾಶ. ಅಲ್ಲಿಂದ ವಾಯು, ವಾಯುವಿನಿಂದ ವೃಷ್ಟಿ, ವೃಷ್ಟಿಯಿಂದ ಪೃಥ್ವಿಯನ್ನು ಹೊಂದಿ, ಅನ್ನದ್ವಾರಾ ಪುರುಷನಲ್ಲಿ, ಪುರುಷನಿಂದ ವೀರ್ಯರೂಪದಲ್ಲಿ ಸ್ತ್ರೀಯಲ್ಲಿ ಬಂದು ಮಾನವ ಜನ್ಮವನ್ನು ಹೊಂದುತ್ತಾರೆ.

ಅದೇ ಮಾತನ್ನೇ ಪ್ರಶ್ನೋಪನಿಷತ್ತಿನಲ್ಲಿ ಈ ರೀತಿ ಹೇಳಿದೆ—

**ಸಂವತ್ಸರೋವೈ ಪ್ರಜಾಪತಿಸ್ತಸ್ಯಾಯನೇ ದಕ್ಷಿಣಂ ಚೋತ್ತರಂಚ ತದ್ಯೇಹವೈತದಿಷ್ಟಾಪೂರ್ತೇ ಕೃತಮಿತ್ಯುಪಾಸತೆ ತೇ ಚಾಂದ್ರಮಸಮೇವ ಲೋಕಮಭಿಜಯಂತೇ । ತ ಏವ ಪುನರಾವರ್ತಂತೇ ತಸ್ಮಾದೇತೇಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯಂತೆ । ಏಷಹವೈರಯಿರ್ಯಃ ಪಿತೃಯಾಣಃ ॥೯॥**

**ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾತ್ಮಾನ ಮನ್ವಿಷ್ಯಾದಿತ್ಯಮಭಿಜಯಂತ ಏತದ್ವೈ ಪ್ರಾಣಾನಾಮಾಯತನಮೇತದಮೃತಮಭಯ ಮೇತತ್ಪರಾಯಣ ಮೇತ ತ್ತಸ್ಮಾನ್ನಪುನರಾವರ್ತಂತೆ ॥೧೦॥**

**ಮಾಸೋವೈ ಪ್ರಜಾಪತಿಸ್ತಸ್ಯ ಕೃಷ್ಣಪಕ್ಷ ಏವ ರಯಿಃ ಶುಕ್ಲಃ ಪ್ರಾಣಃ ॥೧೧॥**

**ಅಹೋ ರಾತ್ರೋವೈ ಪ್ರಜಾಪತಿಸ್ತಸ್ಯಾಹರೇವಪ್ರಾಣೋ ರಾತ್ರಿರೇವ ರಯಿಃ ॥೧೨॥**

ಸಂವತ್ಸರವು ಪ್ರಜಾಪತಿಯು. ಅದಕ್ಕೆ ಉತ್ತರ ದಕ್ಷಿಣ

ಎಂಬ ಎರಡು ಅಯನಗಳಿವೆ. ಕರ್ಮಮಾಡುವ ಕರ್ಮಮಾರ್ಗಿಗಳು ಚಂದ್ರಲೋಕವನ್ನು ಹೊಂದುತ್ತಾರೆ. ಅವರು ಪುನಃ ಪುನಃ ಜನ್ಮಗಳನ್ನು ಹೊಂದುತ್ತಾರೆ ಮತ್ತು ಯಾರು ಪ್ರಜೆಯನ್ನು ಇಚ್ಛಿಸುತ್ತಾರೆಯೋ ಅವರು ಈ ಪಿತೃಯಾನ ಮಾರ್ಗವನ್ನು-ರಯಿಯ ಮಾರ್ಗವನ್ನು ಅವಲಂಬನೆಮಾಡುತ್ತಾರೆ. ಯಾರು ತಪಸ್ಸು, ಬ್ರಹ್ಮಚರ್ಯೆ, ಶ್ರದ್ಧಾ, ವಿದ್ಯೆಗಳಮೂಲಕ ಆತ್ಮನನ್ನು ಹುಡುಕುತ್ತಾರೆಯೋ ಅವರು ಆ ದಿ ತ್ಯ ನ ನ್ನು ಹೊಂದುತ್ತಾರೆ. ಈ ಆದಿತ್ಯನು ಪ್ರಾಣಗಳಿಗೆ ಆಧಾರನಾಗಿದ್ದಾನೆ ಮತ್ತು ಈತನೇ ಅಮೃತ-ಅಭಯ ಪರಾಯಣನಾಗಿದ್ದಾನೆ. ಇವನನ್ನು ಹೊಂದುವವರು ಪುನಃ ಜನ್ಮಕ್ಕೇ ಹಿಂದಿರುಗುವುದಿಲ್ಲ. ಮಾಸವು ಪ್ರಜಾಪತಿಯು. ಅದರ ಶುಕ್ಲಪಕ್ಷವು ಪ್ರಾಣವು. ಕೃಷ್ಣ ಪ ಕ್ಷ ವು ರಯಿಯು. ಅಹೋರಾತ್ರರೂಪ ದಿನವು ದಿವ್ಯಪ್ರಜಾಪತಿಯು ಅದರ ಅಹಸ್ಸು—ಹಗಲು ಪ್ರಾಣವು. ರಾತ್ರಿಯು ರಯಿಯು.

**ಸತ್ಯೇನ ಲಭ್ಯಸ್ತಪಸಾಹ್ಯೇಷ ಆತ್ಮಾ ಸಮ್ಯಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ । ಅಂತಃಶರೀರೇ ಜ್ಯೋತಿರ್ಮಯೋಹಿ ಶುಭ್ರೋಯೆಂಪಶ್ಯಂತಿ ಯತಯಃ ಕ್ಷೀಣದೋಷಾಃ ॥೫॥**

**ಸತ್ಯಮೇವ ಜಯತೇ ನಾನೃತಂ ಸತ್ಯೇನ ಪಂಥಾ ವಿತತೋ ದೇವಯಾನಃ । ಯೇನಾಕ್ರಮಂ ತ್ಯೃಷಯೋ ಹ್ಯಾಪ್ತ ಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಂ ॥೬॥** (ಮುಂಡಕ ೩-೧)

ಸತ್ಯ, ತಪಸ್ಸು, ಜ್ಞಾನ, ಬ್ರಹ್ಮಚರ್ಯಗಳಿಂದ ಈ ಆತ್ಮನು ಹೊಂದಲ್ಪಡಬಲ್ಲನು. ಈ ಶರೀರದೊಳಗೆ ಜ್ಯೋತಿರೂಪವಾದ ಶುಭ್ರವು ಇದೆ. ಅದನ್ನು ಪವಿತ್ರರಾದ ಯತಿಗಳು ನೋಡುತ್ತಾರೆ.

ಸತ್ಯಕ್ಕೆ ಜಯವಾಗುತ್ತದೆ. ಅಸತ್ಯಕ್ಕೆ ಇಲ್ಲ. ಸತ್ಯದಿಂದ-ದೇವಯಾನ ಮಾರ್ಗದಿಂದ ಉತ್ತಮಗತಿಯು ಆಗುತ್ತದೆ. ಈ ಮಾರ್ಗದಲ್ಲಿ ಆಪ್ತಕಾಮರಾದ ಋಷಿಗಳು ಹೋಗುತ್ತಾರೆ. ಸತ್ಯದ ಪರಮಪದವನ್ನು ಹೊಂದುತ್ತಾರೆ.

**ಏಷ ದೇವಪಥೋ ಬ್ರಹ್ಮಪಥಃ** (ಛಾಂ. ೧೪-೧೫-೬)

ಈ ದೇವಪಥವೇ ಬ್ರಹ್ಮಪಥವು.

**ಹಂತ ತಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಂ ।**
**ಯಥಾಚ ಮರಣಂ ಪ್ರಾಪ್ಯ ಆತ್ಮಾಭವತಿ ಗೌತಮ ॥೬॥**
**ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।**
**ಸ್ಥಾಣುಮನ್ಯೇನುಸಂಯಂತಿ ಯಥಾಕರ್ಮ ಯಥಾಶ್ರುತಂ ॥**

(ಕಠ ೨-೫)

ಸತ್ತನಂತರ ಆತ್ಮನಿಗೆ ಯಾವ ಗತಿಯು ಆಗುತ್ತದೆಯೋ ಆ ರಹಸ್ಯವನ್ನು ಹೇಳುತ್ತೇನೆ. ಕೆಲವು ಆತ್ಮರುಗಳು ಮತ್ತೊಂದು ದೇಹವನ್ನು ಹೊಂದುವುದಕ್ಕಾಗಿ ಗರ್ಭವನ್ನು ಪ್ರವೇಶ ಮಾಡುತ್ತಾರೆ. ಇನ್ನು ಕೆಲವರು ಸ್ಥಾಣು—ಬ್ರಹ್ಮನನ್ನು ಹೊಂದುತ್ತಾರೆ.

ಹೀಗೆ ಈ ಎರಡು ಮಾರ್ಗಗಳು ಉಪನಿಷತ್ತುಗಳಲ್ಲಿಯೂ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಒಂದು ಶ್ರದ್ಧೆ, ತಪಸ್ಸು, ಬ್ರಹ್ಮಚರ್ಯೆ, ವಿದ್ಯಾಜ್ಞಾನಗಳದ್ದು. ಮತ್ತೊಂದು ಅಂಧವಿಶ್ವಾಸವುಳ್ಳ ಕಾಮ್ಯಕರ್ಮಗಳದ್ದು. ಈ ಎರಡು ಮಾರ್ಗಗಳನ್ನೂ ತಿಳಿದು ಮನುಷ್ಯನು ತನ್ನ ಮಾರ್ಗವನ್ನು ಸಿದ್ಧಮಾಡಿಕೊಳ್ಳಬೇಕು. ದೈವೀ ಸಂಪತ್ತನ್ನು ಹೆಚ್ಚಿಸಿಕೊಂಡು ಉತ್ತರಾಯಣ ಮಾರ್ಗದಲ್ಲಿ

ಹೋಗುವ ಯೋಗ್ಯತೆಯನ್ನು ಪಡೆದುಕೊಳ್ಳಬೇಕು ಇಲ್ಲದಿದ್ದರೆ ಜನ್ಮಮರಣಗಳ ಚಕ್ರಕ್ಕೆ ಸಿಕ್ಕುವುದು ಖಂಡಿತ

ಈ ಎರಡು ದಾರಿಗಳಲ್ಲಿ ಒಂದು ಕ್ರಮ ಮುಕ್ತಿಮಾರ್ಗ ಮತ್ತೊಂದು ಪುನರ್ಜನ್ಮಕ್ಕೆ ತಿರುಗುವ ಮಾರ್ಗ ಈ ಎರಡನ್ನೂ ಮೀರುವವನು ಯೋಗಿ ಆತನು ಸದಾ ಸರ್ವದಾ ಸಚ್ಚಿದಾನಂದಾ ದ್ವಿತೀಯ ಬ್ರಹ್ಮಾನು ಸಂಧಾನದಲ್ಲಿರುವುದರಿಂದ ಅವನಿಗೆ ಅರ್ಚಿ ರಾದಿ ಮಾರ್ಗವಾಗಲೀ ಧೂಮಾದಿ ಮಾರ್ಗವಾಗಲೀ ಮೋಹ ವನ್ನುಂಟುಮಾಡಲಾರದು

ಈ ಯೋಗಿಯ ಸ್ಥಾನವು ಬಲು ಹೆಚ್ಚಿನದು ವೇದಾ ಧ್ಯಯನ, ಯಜ್ಞ, ತಪಸ್ಸು, ದಾನಗಳಿಂದ ಕಾಮ್ಯಕರ್ಮಗಳಿಗೆ ಯಾವ ಫಲ ಉಂಟಾಗುವುದೋ ಅ ವೆ ಲ್ಲ ಕ್ಕಿಂ ತ ಲೂ ಹೆಚ್ಚಿನ ಸ್ಥಾನವು ಈ ಯೋಗಿಯದು

ಆದುದರಿಂದ "ಅರ್ಜುನ ! ನೀನು ಎಲ್ಲ ಕಾಲಗಳಲ್ಲಿಯೂ ನನ್ನನ್ನು ಧ್ಯಾನಮಾಡುತ್ತಾ ನಿನ್ನ ಕರ್ತವ್ಯಕರ್ಮವನ್ನು ಮಾಡು ಎಂದು ಭಗವಂತನು ಉಪದೇಶಮಾಡುತ್ತಾನೆ"



# ರಾಜವಿದ್ಯಾ ರಾಜಗುಹ್ಯಯೋಗ

ಏಳನೆಯ ಅಧ್ಯಾಯದಲ್ಲಿ ಪರಮಾತ್ಮನು ಯಾವ ವಿಜ್ಞಾನ ಸಹಿತವಾದ ಜ್ಞಾನವನ್ನು ಉಪದೇಶಮಾಡಿದನೋ ಅದನ್ನೇ ಈ ಅಧ್ಯಾಯದಲ್ಲಿ ಮುಂದುವರಿಸುತ್ತಾನೆ ದೋಷದೃಷ್ಟಿರಹಿತನಾದವನೆಂದು ಅರ್ಜುನನನ್ನು ಸಂಬೋಧಿಸುತ್ತಾನೆ

ವಿಜ್ಞಾನಸಹಿತವಾದ ಈ ಜ್ಞಾನವು ರಾಜವಿದ್ಯೆ ವಿದ್ಯೆಗಳಲ್ಲೆಲ್ಲಾ ರಾಜ, ಸಾರ್ವಭೌಮ ಹಾಗೆಯೇ ರಾಜ–ಗುಹ್ಯ ರಹಸ್ಯವಾದುದರಲ್ಲೆಲ್ಲಾ ಶ್ರೇಷ್ಠವಾದ ರಹಸ್ಯ ಇತರರಿಗೆ ತಿಳಿಸದೆ ಸಂಬಂಧಪಟ್ಟವರಿಗೆ ಮಾತ್ರ ತಿಳಿಸಲ್ಪಡಬೇಕಾದುದು ರಹಸ್ಯ* ಇದು ಅಂತಹ ರಹಸ್ಯಗಳಿಗೆಲ್ಲಾ ಹೆಚ್ಚಿನ ರಹಸ್ಯ ಅಂದರೆ ಅತ್ಯಂತ ಸೂಕ್ಷ್ಮವಾಗಿರುವುದರಿಂದ ಸ್ಥೂಲ ಬುದ್ಧಿಯ ಸಾಮಾನ್ಯ ಮನುಷ್ಯರಿಗೆ ನಿಲುಕದಂತಹ ಗುಪ್ತವಾದ ವಿದ್ಯೆ ಹಾಗೆಯೇ ಪವಿತ್ರವಾದುದು ಉತ್ತಮವಾದುದು ಪ್ರತ್ಯಕ್ಷ ಪರಿಣಾಮವುಳ್ಳದು ಧರ್ಮ ಸ್ವರೂಪವಾದುದು ನಡೆಸಲು ಅತಿ ಸುಲಭವಾದುದು ಮತ್ತು ಅವಿನಾಶಿಯಾದುದು ಈ ವಿಶೇಷಣಗಳುಳ್ಳದು ಈ ವಿದ್ಯೆಯು

---

*ರಹಸ್ಯ ಎಂದರೆ ಗುಟ್ಟು ಇದು ಏತಕ್ಕೆ ? ರಹಸ್ಯವಾಗಿ ವಿದ್ಯೆಯನ್ನು ಏತಕ್ಕೆ ಇಡಬೇಕು ? ಅನಧಿಕಾರಿಗಳನ್ನು ದೂರವಾಗಿಡುವುದಕ್ಕಾಗಿ

ಅಧಿಕಾರಿಯಲ್ಲದವನಿಗೆ ತಿಳಿಸುವುದರಿಂದ ಅವನು ಆ ಜ್ಞಾನ ವನ್ನು ದುರುಪಯೋಗಮಾಡಿಕೊಂಡು ಲೋಕಕ್ಕೆ ಅಪಕಾರ ಮಾಡುವ ಸಂಭವವಿರುತ್ತದೆ. ಮಂತ್ರ ತಂತ್ರ ಶಾಸ್ತ್ರಗಳನ್ನು ಅಭ್ಯಾಸಮಾಡುವವನು ಸ್ವಾರ್ಥರಹಿತನಾಗಿ ಪಾಪಭೀರುವಾಗಿ, ಸಾತ್ವಿಕನಾಗಿದ್ದರೆ ಆತನ ವಿದ್ಯೆಯು ವಿಶೇಷಸಂದರ್ಭದಲ್ಲಿ ಲೋಕೋಪಕಾರಕ್ಕೆ ಮಾತ್ರ ಉಪಯೋಗಿಸಲ್ಪಡುವುದು. ಅದಿಲ್ಲದೆ ಸ್ವಾರ್ಥಿಯಾದ ಅಪಕ್ವಹೃದಯದವನಿಗೆ ಉಪದೇಶಮಾಡಿದರೆ ಆತನು ಅದನ್ನು ದುರುಪಯೋಗಮಾಡುವುದರಿಂದ ಆಗುವ ಲೋಕಕಂಟಕ ಕರವಾದ ಕಾರ್ಯಗಳ ಪಾಪಕ್ಕೆ ಅವನು ಹೇಗೆಯೋ ಹಾಗೆಯೇ ಅವನಿಗೆ ವಿದ್ಯೆಯನ್ನು ಉಪದೇಶಮಾಡಿದ ಗುರುವೂ ಪಾಪಭಾಗಿ ಯಾಗಬೇಕಾಗುತ್ತಾನೆ ವೈದ್ಯಶಾಸ್ತ್ರದಲ್ಲಿ ಮೂಲಿಕಾ ಮುಂತಾದ ರಹಸ್ಯಜ್ಞಾನವು ಅರ್ಧರ್ಧ ತಿಳಿದು ತಪ್ಪುತಿಳಿವಿನಿಂದ ಅದನ್ನು ಪ್ರಯೋಗಿಸಿದಾಗ ಪರಸ್ಪರ ವಿರೋಧಮೂಲಿಕೆಗಳೂ ರಸ ಗಂಧಕ ಪಾಷಾಣಗಳೂ ರೋಗಿಗೆ ಮಾರಕಗಳಾಗಬಹುದು. ಆದುದರಿಂದ ರಹಸ್ಯ ವಿದ್ಯೆಯು ಅನಧಿಕಾರಿಗಳನ್ನು ದೂರವಾಗಿಡುವುದಕ್ಕೆ ಬೇಲಿ ಯಂತೆ ವಿದ್ಯೆಯ—ಜ್ಞಾನದ ರಕ್ಷಣೆಗಾಗಿಯೇ ಇದೆ.

ಇದು ಅಂತಹ ಎಲ್ಲ ರಹಸ್ಯವಿದ್ಯೆ*ಗಳಿಗೂ ರಾಜನಂತೆ ಇದೆ. ಅಂದರೆ ಅತ್ಯುತ್ತಮ-ಶ್ರೇಷ್ಠವಾದುದು. ಈ ವಿದ್ಯೆಗೆ

*ವಿದ್ಯೆಗಳನ್ನು ೧೪ ಅಥವಾ ೧೮ ಎನ್ನುತಾರೆ. ಋಕ್, ಯಜು, ಸಾಮ, ಅಥರ್ವಣವೆಂಬ ನಾಲ್ಕು ವೇದಗಳು. ಶಿಕ್ಷಾ, ವ್ಯಾಕರಣ, ಕಲ್ಪ, ನಿರುಕ್ತ, ಛಂದಸ್ಸು ಜ್ಯೋತಿಷ ಎಂಬ ವೇದಾಂಗಗಳು ಮೀಮಾಂಸಾ ನ್ಯಾಯ, ಧರ್ಮಶಾಸ್ತ್ರ ಪುರಾಣ ಇವುಗಳೆಲ್ಲ ಸೇರಿ ೧೪ ವಿದ್ಯೆಗಳಾಗುತ್ತವೆ. ಆಯುರ್ವೇದ, ಧನುರ್ವೇದ ಗಾಂಧರ್ವವೇದ, ಅರ್ಥಶಾಸ್ತ್ರ ಈ ನಾಲ್ಕು ಸೇರಿದರೆ ಹದಿನೆಂಟು ವಿದ್ಯೆಗಳಾಗುತ್ತವೆ

ತಕ್ಕ ಅಧಿಕಾರಿಯನ್ನು ಸಹಾ ಇಲ್ಲಿಯೇ ಸೂಚಿಸಿದ್ದಾರೆ. ಅನ ಸೂಯವೇ ಎಂದು ಸಂಬೋಧಿಸಿದ್ದಾರೆ. ದೋಷದೃಷ್ಟಿರಹಿತ ನಾದವನು ಅನಸೂಯನು. ತನಗೆ ಉಪದೇಶಮಾಡುವವನು ಸಾಮಾನ್ಯಮನುಷ್ಯನಲ್ಲ. ಈತನಿಂದ ಬರುವ-ಹೊರಹೊರಡುವ ಪ್ರತಿಯೊಂದು ಶಬ್ದವೂ ಭಾವವೂ ಅತ್ಯಂತ ಪವಿತ್ರ, ಉಪಾದೇಯ ಎಂಬ ಭಾವ-ಶ್ರದ್ಧೆಯಿರುವವನು ದೋಷದೃಷ್ಟಿರಹಿತನು. ಇದರ ಜೊತೆಗೆ ಗುರುವಿನ ಉಪದೇಶದಲ್ಲಿ ಅಚಲವಾದ ಶ್ರದ್ಧೆಯಿರಬೇಕು ಶ್ರದ್ಧೆಯಿಲ್ಲದವನು ಈ ಧರ್ಮವನ್ನು ತಿಳಿಯಲಾರನು. ಉಪದೇಶ ಮಾಡಿದ ಧರ್ಮದ ರಹಸ್ಯವನ್ನು ತಿಳಿಯಲು ಅವನಿಗೆ ಶಕ್ತಿಯಿಲ್ಲ. ಹನ್ನೊಂದನೆಯ ಶ್ಲೋಕದಲ್ಲಿ ಇದನ್ನು ಒತ್ತಿ ಹೇಳಿ, "ಮನುಷ್ಯ ದೇಹವನ್ನು ಧಾರಣೆಮಾಡಿದ ನನ್ನನ್ನು ಸಾಮಾನ್ಯ ಮನುಷ್ಯನೆಂದೇ ತಿಳಿದು ಅಜ್ಞಾನಿಗಳು ಮೋಸಹೋಗುತ್ತಾರೆ. ಸಮಸ್ತ ಭೂತ ಗಳಿಗೆ-ಸಮಸ್ತಪ್ರಾಣಿಗಳಿಗೆ ಮಹೇಶ್ವರಸ್ವರೂಪವಾದ ನನ್ನ ಭಾವ ವನ್ನು ತಿಳಿಯಲಾರದೆ ನನ್ನನ್ನು ಮನುಷ್ಯನೆಂದು ತಿರಸ್ಕರಿಸುತ್ತಾರೆ. ಆದುದರಿಂದ ನಾನು ಹೇಳುವ ಅತಿರಹಸ್ಯಮಯವಾದ ಈ ಜ್ಞಾನದ ವಿಷಯದಲ್ಲಿ ಅವರಿಗೆ ಶ್ರದ್ಧೆಯಿರುವುದಿಲ್ಲ. ಅಂತಹವರು ಮೃತ್ಯು ರೂಪ ಸಂಸಾರದಲ್ಲಿ ಸಿಕ್ಕಿಬಿದ್ದು ನನ್ನನ್ನು ಹೊಂದದೆ ಪುನಃ ಪುನಃ ಜನ್ಮಮರಣಗಳಿಗೆ ಹಿಂದಿರುಗುತ್ತಾರೆ." ಎಂದು ಎಚ್ಚರಿಸಿ ದ್ದಾನೆ.

ಹಿಂದಿನ ಅಧ್ಯಾಯದ ಕೊನೆಯಲ್ಲಿ ಮರಣಾನಂತರದ ಸ್ಥಿತಿ ಅಥವಾ ಮುಕ್ತಿಯ ಸೂಚನೆಯಿದೆ. ಮುಕ್ತಿಯು ಎರಡು ವಿಧ. ಪಿತೃಯಾನಮಾರ್ಗದಲ್ಲಿ ಪ್ರಯಾಣಮಾಡಿದವರು ಮುಕ್ತಿ

ಯನ್ನು ಪಡೆಯುವುದಿಲ್ಲ. ಚಂದ್ರಲೋಕ, ಸ್ವರ್ಗಾದಿಲೋಕಗಳಲ್ಲಿ ಕೆಲವು ಕಾಲವಿದ್ದು ಪುಣ್ಯಫಲವಾದ ಸುಖ ಭೋಗಗಳ ಅನುಭವದ ನಂತರ ಪುನಃ ಮರ್ತ್ಯಲೋಕಕ್ಕೇ ಬರುತ್ತಾರೆ. ಅವರಿಗೆ ಮುಕ್ತಿ ಯಿಲ್ಲ. ದೇವಯಾನಮಾರ್ಗದಲ್ಲಿ-ಅಗ್ನಿ ಜ್ಯೋತಿ ಮುಂತಾದ ಉತ್ತ ರಾಯಣಮಾರ್ಗದಲ್ಲಿ ಪ್ರಯಾಣಮಾಡಿದವರು ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಬಹುಕಾಲವಿದ್ದು ನಂತರ ಆ ಬ್ರಹ್ಮನ ಜೊತೆ ಯಲ್ಲಿಯೇ ಕೈವಲ್ಯವನ್ನು ಪಡೆಯುತ್ತಾರೆ. ಇದು ಕ್ರಮಮುಕ್ತಿ. ಎರಡನೆಯ ಸಾಕ್ಷಾನ್ಮುಕ್ತಿಯು ಕೇವಲ ಸಮ್ಯಗ್ದರ್ಶಿಗಳಾದ ಜ್ಞಾನಿಗಳಿಗೆ ಲಭಿಸುವುದು. ಕ್ರಿಮಿ ಕೀಟ ಪಶು ಪಕ್ಷಿಮುಂತಾದ ಎಲ್ಲ ವಸ್ತುಗಳಲ್ಲಿಯೂ ಸ್ಥಾವರಜಂಗಮಜಗತ್ತಿನಲ್ಲಿಯೂ ಪರಮಾತ್ಮನನ್ನು ನೋಡಬಲ್ಲ, ಅಹರ್ನಿಶಿಯೂ ಭಗವತ್ಸ್ವರೂಪಧ್ಯಾನದಲ್ಲಿಯೇ ಮಗ್ನ ರಾಗಿ ಸಮಸ್ತಕಾಮನೆಗಳನ್ನೂ ಹೃದಯದಿಂದ ದೂರ ಇಟ್ಟಿರುವ ಜ್ಞಾನೀ ಭಕ್ತರಿಗೆ ಮಾತ್ರ ಸದ್ಯೋಮುಕ್ತಿ ಅಥವಾ ಸಾಕ್ಷಾ ನ್ಮುಕ್ತಿಯು ಸಾಧ್ಯ. ಇಂತಹವರು ದೇಹಬಿಟ್ಟೊಡನೆಯೇ ಪರ ಬ್ರಹ್ಮನಲ್ಲಿ ಲೀನವಾಗುತ್ತಾರೆ. ಇವರಿಗೆ ದೇವಯಾನ ಪಿತೃಯಾನ ಗಳ ದಾಕ್ಷಿಣ್ಯವಿಲ್ಲ.

ಎಂಟನೆಯ ಅಧ್ಯಾಯದ ಆರಂಭದಲ್ಲಿನ ಅರ್ಜುನನ "ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ" ಎನ್ನುವ ಪ್ರಶ್ನೆಗೆ ಕೊಟ್ಟ ಉತ್ತರವೂ ಏಳನೆಯ ಅಧ್ಯಾಯದ ಜ್ಞಾನವಿಜ್ಞಾನಗಳ ವಿವರಣೆಯೂ ಈ ಒಂಭತ್ತನೆಯ ಅಧ್ಯಾಯದಲ್ಲಿ ಮುಂದುವರೆದಿದೆ.

ಅಧ್ಯಾತ್ಮ ವಿದ್ಯೆಯನ್ನು ಎಲ್ಲವಿದ್ಯೆಗಳಿಗಿಂತಲೂ ಹೆಚ್ಚಿನದೆಂದು

ಹೊಗಳುವುದೇ ಈ ಅಧ್ಯಾಯದ ಪ್ರಾರಂಭ. ಅಧ್ಯಾತ್ಮ ವಿದ್ಯೆಯನ್ನು ತಿಳಿದುಕೊಳ್ಳದೆ ಇತರ ವಿದ್ಯೆಗಳನ್ನು ಅಭ್ಯಾಸಮಾಡಿದರೆ ಅವನನ್ನು ಶ್ರೋತ್ರಿಯನೆನ್ನಬಹುದು. "ಬ್ರಹ್ಮನಿಷ್ಠ"ಎನ್ನಲಾಗುವುದಿಲ್ಲ. ಈ ರಹಸ್ಯಮಯವಾದ ಅಧ್ಯಾತ್ಮ ವಿದ್ಯೆಯನ್ನು ತಿಳಿದರೆ ಮಾತ್ರ ಅವನನ್ನು "ಶ್ರೋತ್ರಿಯ ಬ್ರಹ್ಮನಿಷ್ಠ" ಎಂದು ಕರೆಯಬಹುದು. ಈ ವಿದ್ಯೆಯು ರಾಜಗುಹ್ಯ ಪವಿತ್ರ ಮತ್ತು ಉತ್ತಮ. (ಆದುದರಿಂದಲೇ ಬ್ರಹ್ಮನಿಷ್ಠನನ್ನು ಸರ್ವಜ್ಯೇಷ್ಠ–ಸರ್ವಶ್ರೇಷ್ಠ ಎಂದು ಕರೆಯುತ್ತಾರೆ.) ಪ್ರತ್ಯಕ್ಷ ಫಲವನ್ನು ಕೊಡುವುದು ಧರ್ಮರೂಪವಾದುದು. ಹೆಚ್ಚಿನ ಕಷ್ಟವಿಲ್ಲದೆ ಮಾಡಲು ಸಾಧ್ಯವಾದುದು. ಅವ್ಯಯ ಅವಿನಾಶಿಯಾದುದು.

ಮಾಡಲು ಸುಲಭವಾದುದೆಂದು ಹೇಳಿದಾಗ ಕಷ್ಟಕರವಾದ ಯೋಗ ತಪಸ್ಸುಗಳನ್ನು ಆಚರಿಸುವುದೇಕೆ? ಜನಗಳ ಪ್ರವೃತ್ತಿಯು ಸುಲಭವಾದುದನ್ನು ಬಿಟ್ಟು ದುಃಖಕ್ಕೆ ಸಿಕ್ಕಿ ಜನನಮರಣಗಳಿಗೆ ತುತ್ತಾಗುವುದೇಕೆ? ಎಂಬ ಪ್ರಶ್ನೆಯು ಹುಟ್ಟಬಹುದು. ಅದಕ್ಕೆ ಉತ್ತರರೂಪವಾಗಿಯೇ ಮೂರನೆಯ ಶ್ಲೋಕವಿರುವುದು. ಹೊರಗಿನ ಶತ್ರುಗಳನ್ನು ನಾಶಮಾಡಲು ಸಮರ್ಥನಾಗಿರಬಹುದು. ಅಶ್ರದ್ಧೆಯೆಂಬ ಒಳಗಿನ ಶತ್ರುವನ್ನು ನಾಶಮಾಡಲು ಸಮರ್ಥನಾಗದಿದ್ದರೆ ಕಲಿತಿರುವ ವಿದ್ಯೆಯೂ ಬಾಯಿಯಲ್ಲಾಡುವ ಮಾತೂ ಉಪಯೋಗಕ್ಕೆ ಬಾರದಂತಾಗುವುವು. ಎಲ್ಲಕ್ಕೂ ಶ್ರದ್ಧೆ ಬೇಕು. ಅಧ್ಯಾತ್ಮವಿದ್ಯೆಗಂತೂ ಗುರುವಿನಲ್ಲಿ ಮತ್ತು ವೇದಾಂತ ವಾಕ್ಯಗಳಲ್ಲಿ ಅಖಂಡ ಶ್ರದ್ಧೆಯು ಇರಬೇಕು. ಅದನ್ನು ಇಲ್ಲಿ ಎಚ್ಚರಿಸುತ್ತಾರೆ. ಈ ಧರ್ಮದಲ್ಲಿ ಶ್ರದ್ಧೆಯಿಲ್ಲದಿದ್ದರೆ ಪರಮಾತ್ಮ

ಪ್ರಾಪ್ತಿಯಾಗುವುದಿಲ್ಲ. ಮೃತ್ಯು ರೂಪ ಸಂಸಾರಚಕ್ರದಲ್ಲಿ ಸಿಕ್ಕಿ ತಿರುಗುತ್ತಿರಬೇಕಾಗುತ್ತದೆ. ಈ ಧರ್ಮದಲ್ಲಿ ಶ್ರದ್ಧೆಯಿಲ್ಲ ದಿರುವವರು ನಾಸ್ತಿಕರು. ಅವರು ಆಸುರೀಸಂಪತ್ತಿನಿಂದ ಹುಟ್ಟಿರು ವುದರಿಂದ ವೇದವೇದಾಂತಗಳಲ್ಲಿ ನಂಬಿಕೆಯಿರುವುದಿಲ್ಲ. ಸ್ವಭಾ ವತಃ ಧರ್ಮ ವಿರೋಧಿಗಳು ಗೀತೆಯನ್ನು ಉಪದೇಶಮಾಡಿದ ಗೀತಾಚಾರ್ಯ ಮನುಷ್ಯನಲ್ಲವೆಂದೂ ಮನುಷ್ಯ ರೂಪದಲ್ಲಿರುವ ಜಗದೀಶನೇ ಎಂದೂ ತಿಳಿಯಲಾರರು. ಆದುದರಿಂದ ಅಂತಹವರು ಜಗದ್ಗುರುವಿನ-ಗೀತಾಚಾರ್ಯನ ಮಹಿಮೆಯನ್ನು ತಿಳಿಯಲಾರದೆ ನಾಶಹೋಗುವರು. ಅವರ ಬುದ್ಧಿಯನ್ನು ಆಸುರೀಜ್ಞಾನಯುಕ್ತ ಪಾಪ ದೃಷ್ಟಿನ್ನುತ್ತಾರೆ. ಆಸುರೀ ಬುದ್ಧಿಯುಳ್ಳವರು ಧರ್ಮವಿರೋಧಿ ಗಳು. ವಿವಿಧ ದುರ್ವ್ಯಸನಗಳಲ್ಲಿಯೇ ಅವರ ಮನಸ್ಸು ಹೋಗು ತ್ತಿರುವುದು. ಅವರಿಗೆ ಮೃತ್ಯುಮಯವಾದ ಸಂಸಾರದಲ್ಲಿ— ಧನಾರ್ಜನೆಯಲ್ಲಿ ಪಾಪಕರ್ಮಗಳನ್ನು ಮಾಡುವುದರಲ್ಲಿ ಆಸಕ್ತಿ ಹೆಚ್ಚು. ದುರಭಿಮಾನವು ಹೆಚ್ಚು. ಅಹಂಕಾರದ ಮದದಿಂದ ಅವರು ಕರ್ತವ್ಯಾಕರ್ತವ್ಯಗಳನ್ನು ಮರೆಯುವರು. ಆದುದರಿಂದ ಈ ದೈವೀಜ್ಞಾನದ ಸುಲಭ ಮಾರ್ಗವು ರುಚಿಸುವುದಿಲ್ಲ.

ಸೃಷ್ಟಿಯು ಭೇದಮಯವಾಗಿದೆ. ಯಾವ ವಸ್ತುವೂ ಒಂದಿ ದ್ದಂತೆ ಮತ್ತೊಂದಿರುವುದಿಲ್ಲ. ಎಲ್ಲದರಲ್ಲಿಯೂ ವಿವಿಧ ಆಕಾರ ಬಣ್ಣಗಳಿಂದ ಕೂಡಿದ ಮಣಿಗಳೊಳಗೆ ಆಧಾರವಾಗಿರುವ ಸೂತ್ರ ದಂತೆ [ದಾರದಂತೆ] ಪರಮಾತ್ಮನು ಸರ್ವಸಾಕ್ಷಿಯಾಗಿ ನಿಂತಿ ದ್ದಾನೆ. ಶುಭ ಅಶುಭ, ಗುಣ ಅವಗುಣ, ಒಳ್ಳೆಯದು ಕೆಟ್ಟದ್ದು ಮುಂತಾದ ದ್ವಂದ್ವಗಳಿಂದ ಕೂಡಿದ

ಜಗತ್ತಿನ ರಚನೆಯ ಭೇದಗಳ ಮಧ್ಯೆ ಒಂದಕ್ಕೂ ಮುಟ್ಟದಂತೆ ದೈವೀಗುಣಗಳವರಿಗೆ ಅವರವರ ಕರ್ಮಕ್ಕೆ ತಕ್ಕ ಫಲ ವನ್ನೂ ಆಸುರೀಗುಣಗಳವರಿಗೆ ಅವರ ಕರ್ಮಕ್ಕೆ ತಕ್ಕ ಫ ಲ ವನ್ನೂ ಕೊಡುವ ನಿಯಮದಿಂದ ಜಗದ್ವ್ಯಾಪಾರವು ನ ಡೆ ಯು ತ್ತಿ ದೆ. ದೇವನು ಮಾತ್ರ ಒಂದಕ್ಕೂ ಮುಟ್ಟದೆ ಸರ್ವಸಾಕ್ಷಿಯಾಗಿ ನಿಂತಿರು ವನು. ಭೇದಮಯವಾದ ಜಗತ್ತಿನಲ್ಲಿ ಸಾಧಕರಿಗೊಂದು ಪಾಠ ವಿದೆ. ಅದನ್ನು ಅವರು ಅರಿತು ವಿವೇಕವನ್ನು ಕಲಿಯಬೇಕು.

ಕೆಟ್ಟದರಿಂದ ಒಳ್ಳೆಯದು ಪ್ರಕಾಶಕ್ಕೆ ಬರುತ್ತದೆ. ಬಿಸಲಿನ ತಾಪದ ಅನುಭವನೇ ಇಲ್ಲದಿದ್ದರೆ ಮರದ ನೆರಳಿನ ಸುಖದ ಅನುಭವವು ಹೇಗಾಗಬೇಕು? ಹಿಮಂತಋತುವಿನ ಅನುಭವ ವಾದ ನಂತರವೇ ವಸಂತಕಾಲದ ಸುಖವು ಅನುಭವಕ್ಕೆ ಬರ ಬೇಕು. ಪರಸ್ಪರ ವಿರುದ್ಧವಾದ ವಸ್ತುಗಳ ರಚನೆಯಿಂದ ವಿವೇಕಿಗೆ ಸನ್ಮಾರ್ಗದ ಅರಿವಾಗುವುದು. ಒಂದರ ಸಂಬಂಧದಿಂದ ಮತ್ತೊಂದರ ನಿಜವಾದ ಯೋಗ್ಯತೆಯು ಪ್ರಕಾಶಕ್ಕೆ ಬರುವುದು.

ಎಲ್ಲ ವಿದ್ಯೆಗಳಿಗಿಂತಲೂ ಹೆಚ್ಚಿನ ಈ ರಾಜವಿದ್ಯೆಯ ಲಕ್ಷಣವೇನು ? ಇದನ್ನು ತಿಳಿಯುವುದು ಹೇಗೆ ? ಭಗ ವಂ ತ ನು ನಾಲ್ಕನೆಯ ಶ್ಲೋಕದಿಂದ ಹತ್ತನೆಯ ಶ್ಲೋಕದ ವರೆಗೆ ಇದರ ಸ್ವರೂಪವನ್ನು ವರ್ಣಿಸುತ್ತಾನೆ. ಹನ್ನೊಂದು ಮತ್ತು ಹನ್ನೆರಡನೆಯ ಶ್ಲೋಕಗಳಲ್ಲಿ ಅಜ್ಞಾನಿಗಳ ಸ್ವರೂಪ ವನ್ನು ವರ್ಣಿಸುತ್ತಾನೆ. ' ಅವ್ಯಕ್ತ-ಅಗೋಚರಮೂರ್ತಿಯಾದ ನನ್ನಿಂದ ಈ ಚರಾಚರ ಜಗತ್ತೆಲ್ಲವೂ ತುಂಬಿದೆ. ಎಲ್ಲ ಭೂತ

ಗಳೂ ನನ್ನೊಳಗಿವೆ. ನಾನು ಅವುಗಳೊಳಗಿಲ್ಲ. ವಾಸ್ತವವಾಗಿ ನೋಡಿ ದರೆ ನನ್ನೊಳಗೆ ಯಾವ ಭೂತ-ಪ್ರಾಣಿ ವಸ್ತುವೂ ಇಲ್ಲ. ನಾನು ಎಲ್ಲವುಗಳೊಳಗಿದ್ದು ಅವು ನನ್ನೊಳಗಿದ್ದು ನನಗೆ ಸಂಬಂಧಿಸದಂತೆ ಇರುವುದೇ ನನ್ನ ಈಶ್ವರೀ ಯೋಗವು.

ಮಹಾನ್ ವಾಯುವು ಆಕಾಶದೊಳಗೆ ಸರ್ವತ್ರ ತುಂಬಿರು ವಂತೆ ಸಮಸ್ತ ಭೂತ-ಪ್ರಾಣಿಗಳೂ ನನ್ನೊಳಗೆ ಇರುವುವೆಂದು ತಿಳಿ. ಬ್ರಹ್ಮ ಕಲ್ಪದ ಕೊನೆಯಲ್ಲಿ ಎಲ್ಲಾ ಪ್ರಾಣಿಗಳೂ ನನ್ನ ಪ್ರಕೃತಿಯೊಳಗೆ ಅಡಗುತ್ತವೆ. ಕಲ್ಪದ ಆರಂಭ ದಲ್ಲಿ ಪುನಃ ಅವುಗಳನ್ನು ಹಿಂದಿನಂತೆಯೇ ಹುಟ್ಟಿಸುತ್ತೇನೆ ನನ್ನ ಪ್ರಕೃತಿಯನ್ನು ಮುಂದುಮಾಡಿಕೊಂಡು ಪುನಃ ಪುನಃ ಸೃಷ್ಟಿಮಾಡುತ್ತಿರುತ್ತೇನೆ. ಈ ವಾಂಜಭೌತಿಕ ಜಗತ್ತೆಲ್ಲವೂ ಮಾಯೆಯ ಕೈಯ್ಯಲ್ಲಿ ಸಿಕ್ಕಿ ಅಸ್ವತಂತ್ರವಾಗಿರುತ್ತದೆ. ಆದರ ಆ ಕರ್ಮಗಳು ಸೃಷ್ಟಿರಚನಾ ಪಾಲನಾ ಲಯರೂಪ ಕರ್ಮ ಗಳು ನನ್ನನ್ನು ಬಂಧಿಸಲಾರವು. ನಾನು ಆ ಕರ್ಮಗಳಲ್ಲಿ ಆಸಕ್ತಿ ರಹಿತನಾಗಿ ಉದಾಸೀನನಂತೆಯೇ ಸಂಬಂಧವಿಲ್ಲದವನಂತೆಯೇ ಇದ್ದು ಬಿಡುತ್ತೇನೆ. ನನ್ನ ಪ್ರಕೃತಿಯು ನನ್ನ ಆಧಾರದಿಂದ ಅಧ್ಯಕ್ಷತೆಯಿಂದ ಚರಾಚರಾತ್ಮಕವಾದ ಜಗತ್ತನ್ನು ರಚಿಸುತ್ತದೆ. ಆದುದರಿಂದಲೇ ಇದು ಜನ್ಮ ಮರಣ ರೂಪ ಚಕ್ರದಲ್ಲಿ ಸುತ್ತುತ್ತಿರು ತ್ತದೆ. ಮನುಷ್ಯದೇಹವನ್ನು ಹೊಂದಿರುವ ನನ್ನ ಮಹಿಮೆಯನ್ನು ಪರಮಾತ್ಮ ಭಾವವನ್ನು ತಿಳಿಯದೆ ಅಜ್ಞಾನಿಗಳು ಮೋಸಹೋಗು ವರು. ಸಾಮಾನ್ಯ ಮನುಷ್ಯನೆಂದೆ ತಿರಸ್ಕರಿಸುವರ. ಆದುದ ರಿಂದ ಅಂತಹವರ ಆಶೆಗಳು ವ್ಯರ್ಥವಾಗುವುವು. ಅವರ ಕರ್ಮ

ಗಳು ವ್ಯರ್ಥವಾಗುವುವು. ಅವರ ಜ್ಞಾನಗಳೂ ವ್ಯರ್ಥವಾಗುವುವು. ಆ ಅವಿವೇಕಿಗಳು ಪರಹಿಂಸಾರೂಪ, ಆತ್ಮಜ್ಞಾನರಹಿತ, ಭ್ರಾಂತಿಯುಕ್ತ ತಾಮಸೀಭಾವವನ್ನು ಆಶ್ರಯಿಸುತ್ತಾರೆ. ಜಗತ್ತಿನಲ್ಲಿರುವ ಸಮಸ್ತ ಸಜೀವ ನಿರ್ಜೀವ ಪ್ರಾಣಿಗಳನ್ನೂ ಧಾರಣೆ ಪೋಷಣೆ ಮಾಡುತ್ತಿದ್ದರೂ ಅವುಗಳಿಗೆ ಸಂಬಂಧಿಸವಂತೆ ಇರುವುದೇ ಪರಮಾತ್ಮನ ವೈಶಿಷ್ಟ್ಯ.

ನೀರಿನಲ್ಲಿ ಹುಟ್ಟುವ ಗುಳ್ಳೆಗಳು ತೆರೆ ನೊರೆಗಳು ತೋರಿಕೆಗೆ ನೀರಿನಿಂದ ಬೇರೆಯಾದಂತೆ ಕಾಣುತ್ತವೆಯಾದರೂ ಅವುಗಳೊಳಗೆ ನೀರು ಹೊರತು ಮತ್ತೇನೂ ಇಲ್ಲವೇ ಇಲ್ಲ. ಅವುಗಳ ಭಿನ್ನತ್ವದ ಕಡೆಗೆ ದೃಷ್ಟಿಯನ್ನು ಹೊರಳಿಸಿದರೆ ಪ್ರತಿಯೊಂದೂ ಬೇರೆಬೇರೆಯೇ. ಹಾಗೆಯೇ ಮನುಷ್ಯರೂಪೀ ಪಿಂಡಾಂಡದ ದೃಷ್ಟಿಯಿಂದ ನೋಡುವಾಗ ದೇಹದಲ್ಲಿರುವ ಆತ್ಮನು ಅಥವಾ ಜೀವಾತ್ಮನು 'ನಾನು' ಎಂಬ ರೂಪದಿಂದ ಶರೀರದಲ್ಲೆಲ್ಲಾ ವ್ಯಾಪಿಸಿದ್ದರೂ ಶರೀರದ ಅಸ್ತಿತ್ವಕ್ಕೇ ಆತ್ಮನು ಕಾರಣ ನಾಗಿದ್ದರೂ ಪ್ರತಿಯೊಂದು ಅಂಗದ ಭಿನ್ನ ರೂಪವನ್ನು ನೋಡುವಾಗ ಅದರೊಳಗಿನ ಆತ್ಮನ ಏಕತ್ವಭಾವದ ಲಕ್ಷ್ಯವು ಬರುವುದಿಲ್ಲ. ಹಾಗೆಯೇ ಬ್ರಹ್ಮಾಂಡದ ದೃಷ್ಟಿಯಿಂದ ನಾನಾಭಾವಾಪನ್ನ ಜಗತ್ತಿನಲ್ಲಿ ಸಮಷ್ಟಿರೂಪವಾದ "ನಾನು" ಎಂಬ ರೂಪದಿಂದ ಸರ್ವಾತ್ಮನಾದ ಪರಮಾತ್ಮನು ವ್ಯಾಪ್ತನಾಗಿ ಪರಿಪೂರ್ಣನಾಗಿರುತ್ತಾನೆ. ವಾಸ್ತವವಾಗಿ ನೋಡಿದರೆ ಎಲ್ಲವೂ ಪರಮಾತ್ಮನೇ ಹೊರತು ಮತ್ತೊಂದು ವಸ್ತುವೇ ಇಲ್ಲವೆಂದು ತಿಳಿಯಬರುವುದು. ಆದರೆ ಜಗತ್ತಿನ ಭಿನ್ನ ಭಿನ್ನಭಾವಗಳ ಮೇಲೆ ಲಕ್ಷ್ಯವಿಟ್ಟರೆ ಮಾತ್ರ

ಏಕತ್ವಭಾವವು—ಪರಮಾತ್ಮಭಾವವು ಲಕ್ಷ್ಯಕ್ಕೆ ಬರುವುದಿಲ್ಲ. ಜಗತ್ತಿನ ಪದಾರ್ಥಗಳ ಪ್ರತ್ಯೇಕತಾಭಾಸವೇ ಕಾಣಬರುತ್ತದೆ. ಸಾಧಾರಣವಾಗಿ ಜನಗಳ ದೃಷ್ಟಿಯು ಶರೀರದ, ಜಗತ್ತಿನ ಪೃಥಕ್ತ್ವದ ಮೇಲೆಯೇ ಇರುವುದು ಸಹಜ. ಆದುದರಿಂದಲೇ ಪರಮಾತ್ಮ ಸ್ವರೂಪನಾದ 'ನಾನು' ಅವ್ಯಕ್ತನಾಗಿ ಅಪ್ರಕಟರೂಪದಿಂದ ಜಗತ್ತಿನಲ್ಲೆಲ್ಲಾ ವ್ಯಾಪಿಸಿದ್ದರೂ ಜಗತ್ತಿಗೆಲ್ಲಾ ಆಧಾರನಾದ ಜಗದಾತ್ಮನಾಗಿದ್ದರೂ ನನ್ನಿಂದ ಜಗತ್ತಿನ ಅಸ್ತಿತ್ವವಿರುವುದೇ ಹೊರತು ಜಗತ್ತು ನನ್ನ ಅಸ್ತಿತ್ವಕ್ಕೆ ಕಾರಣವಾಗಿಲ್ಲ. ಆಟಗಾರನ ಆಧಾರದಿಂದ ಯಕ್ಷಿಣಿ ಆಟವು ನಡೆಯುವುದೇ ಹೊರತು ಆ ಯಕ್ಷಿಣಿಯಿಂದ ಅವನ ಅಸ್ತಿತ್ವವನ್ನು ಸಿದ್ಧಮಾಡಲಾಗುವುದಿಲ್ಲ. ಅವನು ಆಟವಾಡಲಿ ಆಡದಿರಲಿ ಅವನಿಂದ ಆಟವೇ ಹೊರತು ಆಟದಿಂದ ಅವನಿಲ್ಲ. ಎಲ್ಲರ ಆತ್ಮನಾದ ಪರಮಾತ್ಮನು ಜಗನ್ನಾಟಕವನ್ನು ಹೂಡಲಿ ಅಥವಾ ಅದನ್ನು ಉಪಸಂಹಾರಮಾಡಲಿ ಆತನಿಂದ ಜಗತ್ತು ನಡೆಯುವುದೇ ಹೊರತು ಜಗತ್ತಿನಿಂದಲೇ ಅವನಿಲ್ಲ. ಜಗತ್ತಿಲ್ಲದಿದ್ದರೆ ಆತನ ಅಸ್ತಿತ್ವಕ್ಕೆ ಚ್ಯುತಿಬರಲಾರದು. ಸ್ವಲ್ಪ ಆಳವಾಗಿ ವಿಚಾರಮಾಡಿದರೆ ಜಗತ್ತಿನ ರೂಪವಾಗಿ ಕಾಣುವುದೆಲ್ಲವೂ ಪರಮಾತ್ಮನೇ. ತೆರೆನೊರೆಗಳ ರೂಪದಲ್ಲಿ ತೋರುವ ಜಲದಂತೆ ಭಿನ್ನ ಭಿನ್ನವಾದ ಎರಡು ವಸ್ತುಗಳಿರುವಾಗ ಒಂದಕ್ಕೆ ಮತ್ತೊಂದು ಆಧಾರವೆನ್ನಬಹುದು. ಒಬ್ಬನೇ ಪರಮಾತ್ಮನೇ ಜಗದ್ರೂಪನಾಗಿ ತೋರುವಾಗ ಆಧಾರ ಆಧೇಯ ವ್ಯಾಪ್ಯ ವ್ಯಾಪಕಭಾವವೆಲ್ಲಿ ಬರುವುದು? ಸಾಧಕನ ವಿಚಾರವಿಮರ್ಶೆಗಾಗಿ ಆಧಾರಾಧೇಯ ಕಲ್ಪನೆಮಾಡಬೇಕಾಗುತ್ತದೆ. ಐಂದ್ರಜಾಲಿಕನು ತನ್ನ ಯಕ್ಷಿಣಿ ಆಟದಲ್ಲಿ ವಿವಿಧವಾದ ಚಮತ್ಕಾರಗಳನ್ನು ತೋರಿಸಿದರೂ ಆಟದ

ಕೊನೆಯಲ್ಲಿ ತಾನೊಬ್ಬನೇ ಉಳಿಯುತ್ತಾನೆ. ಅವನ ಆಟದ ವೈವಿಧ್ಯವು ಆತನನ್ನು ಬಿಟ್ಟು ಬೇರೆಯಾಗಿ ಉಳಿಯುವುದಿಲ್ಲ. ಜಗನ್ನಾಟಕ ಸೂತ್ರಧಾರಿಯಾದ ಪರಮಾತ್ಮನು ವಿವಿಧ ಪಾಂಚಭೌತಿಕ ನಾಮರೂಪಾತ್ಮಕ ಸೃಷ್ಟಿಗೆ ಆಧಾರನಾಗಿ ಕಂಡರೂ ಜಗತ್ತು ಅವನಿಂದ ಭಿನ್ನವಿಲ್ಲ. **ಅಖಂಡ ಸಚ್ಚಿದಾನಂದ ರೂಪವೊಂದೇ ವಿವಿಧ ಜಗದ್ರೂಪವಾಗಿ ತೋರುತ್ತಿರುವುದು ಆತನ ಈಶ್ವರೀಮಾಯೆಯ ವೈಶಿಷ್ಟ್ಯವು.** ಎಲ್ಲೆಲ್ಲಿಯೂ ತುಂಬಿರುವ ಮಹಾವಾಯುವು ಆಕಾಶದ ಆಧಾರದಿಂದಲೇ ಇರುವುದು. ಹಾಗೆಯೇ ಈ ಜಗತ್ತೆಲ್ಲವೂ ನನ್ನೊಳಗೇ ನನ್ನ ಆಧಾರದಿಂದಲ್ಲೇ

ಇರುವುದು." ಎಂದು ಭಗವಂತನು ಹೇಳುತ್ತಾನೆ "ವಾಯುವು ಆಕಾಶದೊಳಗಿರುವುದೇ ಹೊರತು ಆಕಾಶವು ವಾಯುವಿನ ಆಧಾರದಿಂದಲ್ಲ. ವಾಯುವಿಲ್ಲದಿದ್ದರೆ ಆಕಾಶಕ್ಕೇನೂ ಕೊರತೆಯಿಲ್ಲ. ವಾಯುವು ಒಂದೊಂದಾವೃತ್ತಿ ಒಂದೊಂದು ರೂಪವನ್ನು ಧರಿಸುವುದು. ಒಮ್ಮೆ ಮೆಲ್ಲಗೆ ಬೀಸುವುದು. ಒಮ್ಮೆ ಚಂಡಮಾರುತರೂಪದಿಂದ ಗಿಡಮರಗಳನ್ನೂ ಗ್ರಾಮಪಟ್ಟಣಗಳನ್ನೂ ಉರುಳಿಸುವುದು. ಒಮ್ಮೆ ಮೇಘರೂಪದಿಂದ ಆಕಾಶವನ್ನು ಆವರಿಸುವುದು. ಮತ್ತೆ ಒಮ್ಮೆ ಆ ಮೇಘಗಳಿಂದ ಮಳೆಯನ್ನು ಸುರಿಸಿ ಆಕಾಶವನ್ನೇ ತಿಳಿಯಾಗಿ ಮಾಡುವುದು. ಅದರ ಆಕಾರ ವಿಕಾರ ವ್ಯವಹಾರಗಳು ಆಕಾಶಕ್ಕೆ ಅಂಟವು. ಸ್ವಲ್ಪ ಆಳವಾಗಿ ವಿಚಾರಮಾಡಿದರೆ ಯಾವುದು ಆಕಾಶವೋ ಅದೇ ವಾಯುರೂಪವನ್ನು ಧಾರಣೆ

ಮಾಡಿದರೂ ತನ್ನ ಸರ್ವವ್ಯಾಪಕ ಆಕಾಶರೂಪದಿಂದ ಬೇರೆಯಾಗದು. ಹಾಗೆಯೇ ಜಗತ್ತು ಪರಮಾತ್ಮನಿಂದ ಭಿನ್ನವಲ್ಲ.

ಇದನ್ನು ತಿಳಿಯುವುದೇ ರಾಜವಿದ್ಯೆಯು. ಈ ರಹಸ್ಯವು ಸಾಧಕನ ಅರಿವಿಗೆ ಬಂದು ಆ ದೃಷ್ಟಿಯಿಂದ ನೋಡಬೇಕೆಂಬುದೇ ಭಗವಂತನ ಆಶಯ. ಜಗತ್ತಿನಲ್ಲೆಲ್ಲಾ ಈಶ್ವರನು ಅಖಂಡನಾಗಿ ಅವ್ಯಕ್ತನಾಗಿ ತುಂಬಿ ತುಳುಕುತ್ತಿದ್ದರೂ ನೀರಿನಿಂದ ಬೇರೆಯಾಗಿ ತೋರುವ ಗುಳ್ಳೆಯು ರೂಪಭೇದದಿಂದ ನಿಜವನ್ನು ಮರೆಸುವಂತೆ ಜಗದ್ರೂಪವಾಗಿ ಕಾಣುವುದೆಲ್ಲವೂ ರೂಪಭೇದದಿಂದ ಬೇರೆಯಾಗಿ ಕಂಡರೂ ಪರಮಾತ್ಮನಲ್ಲದೆ ಮತ್ತೇನೂ ಅಲ್ಲ. ಎಂಬ ಅರಿವೇ **ತಿಳಿವಿನ- ವಿದ್ಯೆಯ ರಾಜ.** ಅದನ್ನು ನಮ್ಮ ನಿತ್ಯ ಜೀವನದಲ್ಲಿ ಅಳವಡಿಸುವುದೇ ರಾಜಯೋಗ. ಅಜ್ಞಾನಿಯ ಹೃದಯಕ್ಕೆ ಇದು ರಹಸ್ಯವೇ ಸರಿ. ಆತನಿಗೆ ಇದು ಅರ್ಥವಾಗದು. ಆತನ ಆತ್ಮವು ವಿಶಾಲವಾದಲ್ಲದೇ ದೃಷ್ಟಿಯು ಭೇದಮಯ ಬಾಹ್ಯರೂಪದ ಪರಿಧಿಯಿಂದ ಮೇಲಕ್ಕೆ ದಾಟಿ ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಏಕರೂಪನಾದ ಅಸಂಗನಾದ ಜಗದಾತ್ಮನನ್ನು ಗುರ್ತಿಸುವ ಶಕ್ತಿಯು ಬಾರದು. ಅಜ್ಞಾನಿಯ ಆತ್ಮವು ಬೆಳೆದು ಜಗದ್ವ್ಯಾಪಿಯನ್ನು ಏಕಾತ್ಮದೃಷ್ಟಿಯಿಂದ ನೋಡಲು ಸಮರ್ಥವಾದರೆ ಮಾತ್ರ ದೈವೀ ತೇಜಸ್ಸು ಬಲಿಯುವುದು. ಅದಲ್ಲದುದೆಲ್ಲಾ ರಾಕ್ಷಸೀ-ಮೋಹಿನೀ ಭ್ರಾಂತಿಯುಕ್ತ ಜ್ಞಾನಮಾತ್ರ. ಅಂತಹವರು ಮನುಷ್ಯರೂಪವನ್ನು ಧರಿಸಿರುವ ದೇವನನ್ನು—ಗುರುವನ್ನು ಮೇಲಿನ ಹಂತದ ದಿವ್ಯಪೀಠದಲ್ಲಿ ನಿಲ್ಲಿಸಿ ನೋಡುವುದು ಹೇಗೆ? ಪೂಜಿಸಿ ಆನಂದಿ

ಸುವುದು ಹೇಗೆ ? ಅವರದು ಮೊದಲಿನಿಂದ ಕೊನೆಯವರೆಗೂ ಭೇದದೃಷ್ಟಿಯೇ. ಅಸೂಯಾದೃಷ್ಟಿಯೇ. ಆದುದರಿಂದಲೇ ಈ ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನನ್ನು ಇದಕ್ಕೆ ಅಧಿಕಾರಿಯನ್ನಾಗಿ ಭಾವಿಸಿ 'ಅನಸೂಯವೇ' ಎಂದು ಸಂಬೋಧಿಸಿದ್ದಾನೆ. ೧೩ರಿಂದ೧೫ನೆಯ ಶ್ಲೋಕಗಳಲ್ಲಿ ದೈವೀಪ್ರಕೃತಿಯನ್ನು ಆಶ್ರಯಿಸಿದವರು ಪರಮಾತ್ಮನನ್ನು ಪೂಜಿಸುವ ಕ್ರಮವನ್ನು ತಿಳಿಸಿ ೧೬ರಿಂದ೧೯ರವರೆಗೆ ಶ್ಲೋಕಗಳಲ್ಲಿ ಪರಮಾತ್ಮನ ಸ್ವರೂಪವನ್ನು ತಿಳಿಸಿ ೨೦ಮತ್ತು ೨೧ನೆಯ ಶ್ಲೋಕಗಳಲ್ಲಿ ಸಕಾಮಕರ್ಮಿಗಳಿಗೆ ಆಗುವ ಗತಿಯನ್ನು ಭಗವಂತನು ವರ್ಣಿಸಿದ್ದಾನೆ. ೨೨ರಿಂದ ಅಧ್ಯಾಯದ ಕೊನೆಯವರೆಗೂ ಅನನ್ಯಭಕ್ತಿಯ ಲಕ್ಷಣವನ್ನೂ ಅತ್ಯಂತಪಾಪಿ ದುರಾಚಾರಿಯಾಗಿದ್ದರೂ ಪಶ್ಚಾತ್ತಾಪದಿಂದ ಆತನ ಅಂತಃಕರಣವು ಪರಿಶುದ್ಧವಾದರೆ ಆತನನ್ನು ಉದ್ಧರಿಸುವೆನೆಂದೂ ಆದುದರಿಂದ ಮನುಷ್ಯಮಾತ್ರರೆಲ್ಲರೂ ಪರಮಾತ್ಮಪ್ರಾಪ್ತಿಗೆ ಅಧಿಕಾರಿಗಳೆಂದೂ ಆತನಿಗೆ ಬೇಕಾದುದು ಶುದ್ಧ ಭಾವವೆಂದೂ ಬಾಹ್ಯವಲ್ಲವೆಂದೂ ಅಭಯಕೊಟ್ಟು ಅನುಗ್ರಹಿಸಿದ್ದಾನೆ.

ದೈವೀ ಪ್ರಕೃತಿಯನ್ನು ಆಶ್ರಯಿಸಿ ಪರಮಾತ್ಮನನ್ನು ಭಜಿಸುವವರು ಮಹಾತ್ಮರು. ಅನನ್ಯಮನಸ್ಕರಾಗಿ ನನ್ನನ್ನು ಜಗತ್ತಿಗೆ ಆದಿಪುರುಷನೆಂದೂ ಅವ್ಯಯನೆಂದೂ ತಿಳಿದು ಭಜಿಸುತ್ತಾರೆ. ಅವರು ಅಹಿಂಸೆ ಸತ್ಯ ಮುಂತಾದ ದೃಢವಾದ ನಿಯಮಗಳನ್ನು ಹಿಡಿದು ನಿರಂತರವೂ ನನ್ನ ನಾಮಸ್ಮರಣೆಯನ್ನು ಮಾಡುತ್ತಾ ನನ್ನ ಪ್ರಾಪ್ತಿಗಾಗಿ ಎಡೆಬಿಡದೆ ಸಾಧನೆ ಮಾಡುತ್ತಾ ನನ್ನನ್ನು ನಮಸ್ಕರಿಸುತ್ತಾ ಸತತವೂ ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಅನನ್ಯ

ಭಕ್ತಿಯಿಂದ ನನ್ನನ್ನು ಉಪಾಸನೆಮಾಡುತ್ತಾನೆ. ಕೆಲವರು ಜ್ಞಾನಯಜ್ಞದಿಂದ ಪೂಜಿಸುತ್ತಾರೆ. ಕೆಲವರು ಏಕತ್ವದಿಂದ ಅಂದರೆ ಸರ್ವವ್ಯಾಪಿಯಾದ ವಾಸುದೇವನೇ ಜಗದ್ರೂಪಿಯಾಗಿ ತೋರುತ್ತಿರುವನೆಂದೂ ಎಲ್ಲವೂ ಆತನೇ ಎಂದೂ ಭಜಿಸುತ್ತಾರೆ. ಕೆಲವರು ತಾನು ಬೇರೆ ಪರಮಾತ್ಮನು ಬೇರೆ ಎಂಬ ಸೇವ್ಯ ಸೇವಕ ಭಾವದಿಂದ ಉಪಾಸನೆ ಮಾಡುತ್ತಾರೆ. ಮತ್ತೆ ಕೆಲವರು ವಿವಿಧವಾಗಿ ತಮತಮಗೆ ತಿಳಿದಂತೆ ಬೇರೆಬೇರೆ ಭಾವಗಳಿಂದ ಸೇವಿಸುತ್ತಾರೆ. "ಎಲ್ಲವೂ ನಾನೇ. ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಅಗ್ನಿಷ್ಟೋಮ ಮುಂತಾದ ಕರ್ಮಗಳ ಸ್ವರೂಪನೂ ನಾನೇ. ಪಿತೃಗಳಿಗೆ–ದೇವತೆಗಳಿಗೆ ಕೊಡಲ್ಪಡುವ ಹವಿಸ್ಸುಗಳ ಸ್ವರೂಪನೂ ನಾನೇ. ವನಸ್ಪತಿ ಔಷಧಿಗಳೂ ಮಂತ್ರಗಳೂ ಅಗ್ನಿಯಲ್ಲಿ ಹವನಮಾಡುವ ತುಪ್ಪವೂ ಅಗ್ನಿಯೂ ಹವನ ಮಾಡುವ ಕರ್ಮವೂ ನಾನೇ. ನನ್ನ ಸ್ವರೂಪವೇ. ಜಗತ್ತಿಗೆ ತಂದೆ ತಾಯಿ, ಕರ್ಮಫಲದಾತನಾದ ಧಾತೃವೂ, ಪಿತಾಮಹನೂ, ತಿಳಿಯಲ್ಪಡಬೇಕಾದ ಜಗತ್ಪ್ರಭುವೂ, ಪವಿತ್ರವಾದ ಗಂಗಾದಿ ತೀರ್ಥಗಳೂ ಓಂಕಾರವೂ ಚತುರ್ವೇದಗಳೂ ನಾನೇ. ನನ್ನ ಸ್ವರೂಪವೇ. 1 ಗತಿ 2 ಭರ್ತಾ 3 ಪ್ರಭು 4 ಸಾಕ್ಷೀ 5 ನಿವಾಸ 6 ಶರಣ 7 ಸುಹೃತ್, ಉತ್ಪತ್ತಿ, ಪ್ರಲಯ, ಆಧಾರ ಜಗತ್ತಿನ ನಾಶರಹಿತ ವಾದ ಬೀಜಸ್ವರೂಪವೂ, ನಾನೇ ಆಗಿದ್ದೇನೆ.

---

1) ಹೊಂದಲು ಯೋಗ್ಯವಾದ ಸ್ಥಾನ. 2) ಸುಖಸಾಧನೆಗಳನ್ನು ಕೊಡುವವನು. 3) ಒಡೆಯನು. 4) ಎಲ್ಲರ ಪುಣ್ಯಪಾಪಗಳನ್ನು ನೋಡುವವನು. 5) ಸಮಸ್ತ ಪ್ರಾಣಿಗಳ ವಾಸಸ್ಥಾನವು. 6) ಮರೆ ಹೊಕ್ಕವರನ್ನು ಕಾಪಾಡುವವನು. 7] ಪ್ರತ್ಯುಪಕಾರವನ್ನು ನಿರೀಕ್ಷಿಸದೆ ಹಿತಗಳನ್ನು ಕೊಡುವವನು.

ಸೂರ್ಯರೂಪದಿಂದ ಎಲ್ಲವನ್ನು ಸುಡುವವನು ನಾನೇ. ಬೇಸಿಗೆ ಯಲ್ಲಿ ಮಳೆಯನ್ನು ಎಳೆದುಕೊಂಡು ಪುನಃ ಮಳೆಗಾಲದಲ್ಲಿ ಹೊರಕ್ಕೆ ಬಿಡುವವನೂ ನಾನೇ. ಅಮೃತ, ಮೃತ್ಯು, ಶಾಶ್ವತ, ಅಶಾಶ್ವತ ರೂಪ, ಪರಸ್ಪರ ವಿರೋಧಶಕ್ತಿಗಳ ಸ್ವರೂಪ ಸಹ ನಾನೇ ಆಗಿದ್ದೇನೆ.

"ವೇದಗಳಲ್ಲಿ ಹೇಳಿರುವ ಸಕಾಮಕರ್ಮಗಳನ್ನು ಮಾಡು ವವರು ತ್ರೈವಿದ್ಯರು. ಅವರು ಯಜ್ಞಾಧಿಷ್ಠಿತದೇವತಾರೂಪ ದಲ್ಲಿರುವ ನನ್ನನ್ನು ಯಜ್ಞಗಳ ಮೂಲಕ ಭಜಿಸಿ ಸೋಮಪಾನ ಮಾಡಿ ಸ್ವರ್ಗವನ್ನು ಸೇರುತ್ತಾರೆ. ಅಲ್ಲಿ ದೇವಭೋಗಗಳನ್ನು ಅನುಭವಿಸಿ ಅಲ್ಲಿನ ಪುಣ್ಯಫಲವು ಮುಗಿದೊಡನೆಯೇ ಪುನಃ ಭೂಮಿಗೆ ಹಿಂದಿರುಗಿ ಜನ್ಮಪೆತ್ತಿ ಬರುತ್ತಾರೆ. ಹೀಗೆ ಆಶೆಯಿಂದ ಪ್ರೇರಿತರಾಗಿ ಪುನಃ ಯಜ್ಞಗಳನ್ನು ಮಾಡಿ ಸ್ವರ್ಗಕ್ಕೆ ಹೋಗಿ ಅಲ್ಲಿಂದ ಭೂಮಿಗೂ ಭೂಮಿಯಿಂದ ಸ್ವರ್ಗಕ್ಕೂ ತಿರುಗುತ್ತಾ ಜನ್ಮ ಮರಣರೂಪ ಪ್ರಯಾಣವನ್ನು ಮಾಡುತ್ತಿರುತ್ತಾರೆ. ಆದರೆ ಯಾರು ಅನನ್ಯರಾಗಿ ಅಂದರೆ ಪರಮಾತ್ಮನಲ್ಲದೇ ಮತ್ತಿ ನ್ನಾವುದನ್ನೂ ಚಿಂತಿಸದೆ ನನ್ನನ್ನೇ ಧ್ಯಾನಮಾಡುತ್ತ ಚೆನ್ನಾಗಿ ಉಪಾಸನೆ ಮಾಡುತ್ತಾರೆಯೋ ಅಂತಹ ಭಕ್ತರ ಯೋಗಕ್ಷೇಮ ವನ್ನು ನಿರ್ವಹಿಸುತ್ತೇನೆ."

ಅನ್ಯ ದೇವತೆಗಳನ್ನು ಶ್ರದ್ಧೆಯಿಂದ ಭಜಿಸುವವರೂ ಸಹ ಕ್ರಮತಪ್ಪಿ ನನ್ನನ್ನೇ ಪೂಜಿಸುತ್ತಾರೆ ಎಂದು ತಿಳಿ. ಏಕೆಂದರೆ ಸಮಸ್ತ ಯಜ್ಞಗಳನ್ನೂ ಆಯಾ ದೇವತೆಗಳ ಮೂಲಕ ಅನು

ಭವಿಸುವವನು ನಾನೇ. ಅಂತಹ ಏಕದೇಶೀಯ ದೇವತಾ ಉಪಾಸಕರು ನನ್ನ ಸ್ವರೂಪವನ್ನು ಚೆನ್ನಾಗಿ ತಿಳಿಯದೆ ಕಾಮ್ಯ ಫಲಗಳಲ್ಲಿ ಆಸಕ್ತರಾಗಿ ಜನ್ಮ ಮರಣಗಳ ಚಕ್ರದಲ್ಲಿ ಜಾರಿ ಬೀಳುತ್ತಾರೆ. ದೇವತೆಗಳನ್ನು ಭಜಿಸುವವರು ದೇವತೆಗಳನ್ನೂ, ಪಿತೃಗಳನ್ನೂ ಭಜಿಸುವವರು ಪಿತೃಗಳನ್ನೂ, ಪಂಚಮಹಾಭೂತ ರೂಪ ಶಕ್ತಿಗಳನ್ನು ಉಪಾಸನೆ ಮಾಡುವವರು ಆಯಾ ಶಕ್ತಿ ಗಳನ್ನೂ ಹೊಂದುತ್ತಾರೆ. ಸರ್ವೇಶ್ವರನಾದ ನನ್ನನ್ನು ಭಜಿಸು ವವರು ನನ್ನನ್ನೇ ಹೊಂದುತ್ತಾರೆ. ಅರ್ಜುನ! ನಾನು ಚಿಂತಾ ಮಣಿಯಂತೆ. ಯಾರು ಏನನ್ನು ಅಪೇಕ್ಷಿಸಿದರೂ ಯಾವ ಕಾಮನೆ ಯಿಂದ ಯಾವ ದೇವತೆಯನ್ನು ಭಜಿಸಿದರೂ, ಅವರವರಿಗೆ ಹಾಗೆ ಹಾಗೆ ಅನುಗ್ರಹಮಾಡುವೆನು. ನನ್ನ ಸರ್ವವ್ಯಾಪಿತ್ವ, ಸರ್ವನಿಯಂತೃತ್ವ, ಸರ್ವೇಶ್ವರತ್ವಗಳನ್ನು ಗುರ್ತುಮಾಡಿ ನಿಷ್ಕಾಮ ವಾಗಿ ಅಖಂಡಭಾವದಿಂದ ಭಜಿಸಿದರೆ, ಅಖಂಡ ಜ್ಞಾನರೂಪ ಮೋಕ್ಷವನ್ನು ಕೊಡುವೆನು. ನನಗೆ ಭಕ್ತಿಯು, ಭಾವವು ಮುಖ್ಯ. ಬಾಹ್ಯವಲ್ಲ. ಪವಿತ್ರ ಪ್ರೇಮದಿಂದ ನನಗೆ 1) ಒಂದು ಎಲೆ, ಒಂದು ಹಣ್ಣು, ಕಡೆಗೆ ಒಂದು ತೊಟ್ಟು ನೀರನ್ನಾದರೂ ಕೊಟ್ಟರೆಸಾಕು. ಅಂತಹ ಶುದ್ಧ ಬುದ್ಧಿಯ ನಿಷ್ಕಾಮ ಪ್ರೇಮಿಯಾದ ಭಕ್ತನು ಅರ್ಪಿಸಿದ ವಸ್ತುವನ್ನು ಅತ್ಯಂತ ಸಂತೋಷದಿಂದಲೇ ಸ್ವೀಕರಿಸು ತ್ತೇನೆ. ಆದುದರಿಂದ ನೀನು ಯಾವುದನ್ನು ಮಾಡುವೆಯೋ ಆ ಕರ್ಮವನ್ನು ನನಗೆ ಅರ್ಪಿಸು. ಯಾವುದನ್ನು ತಿನ್ನು

1] ದ್ರೌಪದಿಯು ಕೊಟ್ಟುದು ಅಗಸೇಎಲೆ. ಗಜೇಂದ್ರನು ಕೊಟ್ಟುದು ಒಂದು ಹೂ. ಶಬರಿಯು ಕೊಟ್ಟುದು ಹಣ್ಣು. ಈ ಮೂರೂ ಶ್ರದ್ಧಾ ಭಕ್ತಿಯಿಂದ ಅರ್ಪಿಸಲ್ಪಟ್ಟಿದ್ದರಿಂದ ಪರಮಾತ್ಮನು ಸ್ವೀಕರಿಸಿ ಅನುಗ್ರಹಿಸಿದನು.

ವೆಯೋ ಅದನ್ನು ಮುಂಚೆ ನನಗೆ ಅರ್ಪಿಸಿ ನಂತರ ಪ್ರಸಾದ ರೂಪವಾಗಿ ಊಟಮಾಡು. ಏನೇನು ಹೋಮ ಮಾಡುವೆಯೋ ದಾನ ಮಾಡುವೆಯೋ, ತಪಸ್ಸು ಮಾಡುವೆಯೋ ಅದೆಲ್ಲವನ್ನೂ ನನಗೇ ಅರ್ಪಣಮಾಡು. ಹೀಗೆ ಮಾಡಿದರೆ ಕರ್ಮಬಂಧನ ಸ್ವರೂಪ ಶುಭಾಶುಭ ಫಲಗಳಿಂದ ಬೇಗ ಬಿಡುಗಡೆಯಾಗುವೆ. ಕರ್ಮ ಫಲಗಳನ್ನು ಬಿಟ್ಟು ಕರ್ಮಗಳನ್ನು ಮಾಡುವುದು ಸಂನ್ಯಾಸ ಯೋಗವು. ಈ ಯೋಗವನ್ನು ಅನುಸರಿಸಿ ಕರ್ಮ ಮಾಡಿದರೆ ಕರ್ಮಫಲರೂಪ ಬಂಧನದಿಂದ ಬಿಡಲ್ಪಟ್ಟು ನನ್ನನ್ನೇ ಹೊಂದುವೆ.

"ನಾನು ಎಲ್ಲರಲ್ಲಿಯೂ ಸಮನು. ನನಗೆ ದ್ವೇಷಿಗಳೂ ಇಲ್ಲ. ಪ್ರಿಯರೂ ಇಲ್ಲ, ಆದರೆ ಯಾರು ಭಕ್ತಿಯಿಂದ ನನ್ನನ್ನು ಭಜಿಸುವರೋ ಅವರು ನನ್ನಲ್ಲಿರುವರು. ನಾನು ಅವ ರಲ್ಲಿರುವೆನು. ದ್ವೇಷ ಪ್ರೇಮಗಳಿಂದ ಮುಕ್ತನಾದ, ಶುದ್ಧಾಂತಃ ಕರಣನಾದ ನನ್ನನ್ನು ಅವರವರ ಭಕ್ತಿಯೇ ಅವರ ಕಡೆಗೆ ಎಳೆದು ಅವರಿಗೆ ಅನುಗ್ರಹ ಮಾಡುವುದು. ಆದುದರಿಂದ ಅರ್ಜುನ ! ಎಂತಹ ದುರಾಚಾರಿ ಯಾಗಿದ್ದರೂ ಮಾಡಬಾರದ ಪಾಪವನ್ನು ಮಾಡಿದ್ದರೂ ಪಶ್ಚಾತ್ತಾಪದಿಂದ—ಅನನ್ಯ ಭಾವದಿಂದ ನನ್ನನ್ನು ಭಜಿಸಿದರೆ ಅವನನ್ನು ಸಾಧುವೆಂದೇ ಭಾವಿಸುವೆನು. ಅವನ ವ್ಯವ ಹಾರಗಳನ್ನೆಲ್ಲಾ ಪವಿತ್ರಗಳನ್ನಾಗಿ ಮಾಡಿ ಉದ್ಧರಿಸುವೆನು. ಅಂತಹವನು ಬಲು ಜಾಗ್ರತೆಯಾಗಿ ಧರ್ಮಾತ್ಮನಾಗುವನು. ಶಾಶ್ವತ ಶಾಂತಿಯನ್ನು ಹೊಂದುವನು. ಆದುದರಿಂದ ನನ ಭಕ್ತನು ಎಂದಿಗೂ ಕೆಡುವುದಿಲ್ಲ, ಎಂದೇ ತಿಳಿಯಬೇಕು.

ನನ್ನನ್ನು ಆಶ್ರಯಿಸಿದರೆ ಸ್ತ್ರೀಯರೂ, ವೈಶ್ಯರೂ, ಶೂದ್ರರೂ, *ಪಾಪಯೋನಿಗಳೂ ಪರಮ ಗತಿಯನ್ನು ಹೊಂದುತ್ತಿರುವಾಗ ಪುಣ್ಯಾತ್ಮರಾದ ಬ್ರಾಹ್ಮಣರೂ ಭಕ್ತರಾದ ರಾಜರ್ಷಿಗಳೂ ನನ್ನನ್ನು ಹೊಂದುವುದು ಕಷ್ಟವೇ ? ಇಲ್ಲ. ಖಂಡಿತವಾಗಿಯೂ ಇಲ್ಲ. ಮನುಷ್ಯ ಮಾತ್ರನಾದವನು ನನ್ನನ್ನು ಆಶ್ರಯಿಸಿ ಮೋಕ್ಷವನ್ನು ಹೊಂದಬಹುದು. ನನ್ನ ಅನುಗ್ರಹಕ್ಕೆ ಆಧಾರವು ಶುದ್ಧ ಭಕ್ತಿಯು, ಪವಿತ್ರ ಪ್ರೇಮವು.

ಆದುದರಿಂದ ಸಚ್ಚಿದಾನಂದ ಸ್ವರೂಪನಾದ ನನ್ನಲ್ಲಿಯೇ ನಿನ್ನ ಮನಸ್ಸನ್ನಿಡು. ಪರಮೇಶ್ವರನಾದ ನನ್ನಲ್ಲಿಯೇ ಪವಿತ್ರ ಪ್ರೇಮವನ್ನಿಟ್ಟು ಭಕ್ತನಾಗು. ನಿನ್ನ ಸಮಸ್ತ ಕರ್ಮಗಳನ್ನೂ ನನಗಾಗಿಯೇ ಮಾಡು. ನನ್ನನ್ನೇ ನಮಸ್ಕರಿಸು. ಸರ್ವಾತ್ಮನಾದ ನನ್ನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿರುವ ನಿನ್ನನ್ನು (ನಿನ್ನ ಆತ್ಮನನ್ನು) ಏಕೀಭಾವದಿಂದ ನನ್ನಲ್ಲಿಯೇ ನಿಲ್ಲಿಸಿದರೆ ನನ್ನ ಸ್ವರೂಪವನ್ನೇ ಹೊಂದುವೆ.

ಇದು ಭಗವಂತನಿಂದ ಉಪದೇಶಮಾಡಲ್ಪಟ್ಟ ಒಂಭತ್ತನೆಯ ಅಧ್ಯಾಯದ ವೈಶಿಷ್ಟ್ಯವು.

---

*ಇತರರ ಪಾಪದ ಫಲವಾಗಿ ಹುಟ್ಟಿದವರು.



# ವಿಭೂತಿಯೋಗ

ಹಿಳನೇ ಅಧ್ಯಾಯದಲ್ಲಿ ಉಪದೇಶಮಾಡಲು ಪ್ರಾರಂಭಿಸಿದ ಜ್ಞಾನವನ್ನೇ ಇಲ್ಲಿಯೂ ದೇವನು ಮುಂದುವರಿಸುತ್ತಾನೆ ಮೊದಲಿನಿಂದಲೂ ಉಪದೇಶ ಮಾಡುತ್ತಿರುವುದು ಎರಡು ವಿಧಗಳಾದ ಉಪಾಸನೆಗಳಿಗೆ ಅನುಕೂಲಿಸುವಂತಹ ಜ್ಞಾನ ಒಂದು ಉಪಾಧಿಸಹಿತ ಮತ್ತೊಂದು ಉಪಾಧಿರಹಿತ ( "ರಸೋಽಹ ಮಪ್ಸು ನೀರಿನಲ್ಲಿರುವ ರಸಶಕ್ತಿಯು ನಾನು") ಎಂದು ಮುಂತಾಗಿ ಹೇಳುವಾಗ ಆತನ ವಿಭೂತಿಯು ಉಪಾಧಿಸಹಿತ ವಸ್ತುಗಳಲ್ಲಿ ಗುರ್ತಿಸಲ್ಪಡಬೇಕು. ' ಅಧಿಯಜ್ಞೋಽಹ ಮೇವಾತ್ರ ' ಎಂದು ಹೇಳುವಾಗ ಇಲ್ಲಿ ಉಪಾಧಿರಹಿತವಾದ ವಿಭೂತಿಯು ಗುರ್ತಿಸಲ್ಪಡಬೇಕು.

' **ಭೂತಿ** ' ಎಂದರೆ ಇರುವಿಕೆ. ಅಸ್ತಿತ್ವ ' **ವಿಭೂತಿ** ' ಎಂದರ ವಿಶೇಷವಾದ ಅಸ್ತಿತ್ವ ಅಗ್ನಿಯು ಎಲ್ಲೆಲ್ಲಿಯೂ ತುಂಬಿದ ಅದಿಲ್ಲದ ಸ್ಥಳವಿಲ್ಲ ಆದರ ಅದು ಪ್ರಕಟವಾಗುವುದು ಕಟ್ಟಿಗೆ ಹುಲ್ಲು ಮುಂತಾದ ಉಪಾಧಿಗಳಲ್ಲಿ. ಹಾಗೆಯೇ ಪರಮಾತ್ಮನು ಸರ್ವವ್ಯಾಪಿ ಎಲ್ಲೆಲ್ಲಿಯೂ ಇದ್ದಾನೆ ಆದರೆ ಅವನ ಇರವು ಸಾಮಾನ್ಯವಾಗಿ ಎಲ್ಲದರಲ್ಲಿಯೂ ಎಲ್ಲರಿಗೂ ಗೊತ್ತಾಗುವುದಿಲ್ಲ ಆದುದರಿಂದ ಎಲ್ಲೆಲ್ಲಿ ಯಾವುದಾದರೊಂದು ವಿಶೇಷಶಕ್ತಿಯು ಕಾಣಬಂದರೆ ಅಲ್ಲಲ್ಲಿ ಪರಮಾತ್ಮನ ವಿಭೂತಿಯು ಪ್ರಕಟವಾಗಿದೆ ಎಂದು ಅರ್ಥಮಾಡಿಕೊಳ್ಳಬೇಕು

ಈ ಅಧ್ಯಾಯವು ಪ್ರಾರಂಭವಾಗಿರುವುದು "ನಿನ್ನಮೇಲಿ
ಪ್ರೀತಿಯಿಂದ ನಿನ್ನ ಹಿತಕ್ಕಾಗಿ ಹೇಳುತ್ತೇನೆ.-ನನ್ನ ಉತ್ಪತ್ತಿ
ಯನ್ನು ದೇವತೆಗಳಾಗಲೀ ಮಹರ್ಷಿಗಳಾಗಲೀ ತಿಳಿಯಲಾರರು.
ಏಕೆಂದರೆ ನಾನು ಸಮಸ್ತ ಭೂತಗಳಿಗೂ ಮಹರ್ಷಿಗಳಿಗೂ ಆದಿ
ಕಾರಣನಾಗಿದ್ದೇನೆ."

ಪರಮಾತ್ಮನು ಅನಾದಿ, ಅಜನ್ಮ. ಈ ಜಗತ್ತೆಲ್ಲವೂ ಅವ
ನಿಂದ ಹುಟ್ಟಿದೆ. ತಂದೆಯು ಮಗನ ಉತ್ಪತ್ತಿಯನ್ನು ತಿಳಿಯ
ಬಲ್ಲನು. ಮಗನು ತಂದೆಯ ಉತ್ಪತ್ತಿಯನ್ನು ತಿಳಿಯುವುದು
ಸಾಧ್ಯವಿಲ್ಲ. ನದಿಯು ಮುಂದೆಮುಂದೆ ಹರಿದುಹೋಗಬಲ್ಲದು.
ತನ್ನ ಮೂಲಸ್ಥಾನವನ್ನು ನೋಡಲಾರದು.

ಹಾಗೆಯೇ ಜಗತ್ತಿನಲ್ಲಿ ಪರಮಾತ್ಮನ ಸೃಷ್ಟಿ-ಸ್ಥಿತಿ-ಲಯ
ಗಳ ವಿಧಾನಕ್ಕೊಳಪಟ್ಟಿರುವ ಯಾವ ವಸ್ತುವೂ, ಪ್ರಾಣಿಯೂ,
ಶಕ್ತಿಯೂ ತನ್ನ ಉತ್ಪತ್ತಿಗೆ ಕಾರಣನಾದವನನ್ನೇ ತಿಳಿಯಲರಿಯದು.
ಪ್ರತಿಯೊಂದೂ ತನ್ನತನ್ನ ಬುದ್ಧಿಶಕ್ತಿಯ ಕೊನೆಯನ್ನು ಮುಟ್ಟಿ
ಮುಂದೆ ಹೋಗಲಾರದೆ ಅಲ್ಲಿಯೇ ನಿಲ್ಲುವುದು. ಅದರ ಆಚೆಗೆ
ಇರುವುದೇನೆಂಬುದನ್ನು ತಿಳಿಯಲಾರದು—'ಪರಮಾತ್ಮನು ಹೇಗಿ
ದ್ದಾನೆ' ಎಂದರೆ, 'ಅವನು ಇರುವ ಹಾಗೆಯೇ ಇದ್ದಾನೆ' ಎಂದು
ಮಾತ್ರ ಹೇಳಬಹುದು. 'ಹೀಗೆಯೇ ಇದ್ದಾನೆ' ಎಂದು ಎದೆ ತಟ್ಟಿ
ಕೊಂಡು ಹೇಳಲಾರಿಗೂ ಸಾಧ್ಯವಿಲ್ಲ. ಪ್ರಕೃತಿಯೆಂದು ಜ್ಞಾನವೂ
ಖಂಡ. ಪರಮಾತ್ಮನು ಅಖಂಡ.

ಆದುದರಿಂದ ನಾನು ಅನಾದಿಯೆಂದೂ ಲೋಕಮಹೇಶ್ವರ ನೆಂದೂ ಯಾವನು ತಿಳಿಯುವನೋ ಅವನು ಅಸಂಮೂಢನು, ಜ್ಞಾನಿಯು. ಅಂತಹವನು ಎಲ್ಲಪಾಪಗಳಿಂದಲೂ ಬಿಡಲ್ಪಡುತ್ತಾನೆ- ಎಂದು ಮೂರನೆಯ ಶ್ಲೋಕದಲ್ಲಿ ಹೇಳಿದ್ದಾನೆ

"ಬುದ್ಧಿ, ಜ್ಞಾನ, ಅಸಮ್ಮೋಹ ( ಭ್ರಾಂತಿಜ್ಞಾನವಿಲ್ಲದಿರು ವಿಕೆ ) ಕ್ಷಮಾ, ಸತ್ಯ, ದಮ, ಶಮ, ಸುಖ, ದುಃಖ, ಭಾವ, ಅಭಾವ, ಭಯ, ಅಭಯ, ಅಹಿಂಸೆ, ಸಮತೆ, ತುಷ್ಟಿ, ತಪಸ್ಸು, ದಾನ, ಯಶಸ್ಸು, ಅಪಯಶಸ್ಸು, ಇವುಗಳೆಲ್ಲವೂ ನನ್ನಿಂದಲೇ ಪ್ರಾಣಿ ಗಳಿಗೆ ಉಂಟಾಗುವುವು" ಎಂದು ನಾಲ್ಕು ಮತ್ತು ಐದನೆಯ ಶ್ಲೋಕ ಗಳಲ್ಲಿ ಹೇಳುತ್ತಾನೆ

ಅಂದರೆ ಬುದ್ಧಿ ಜ್ಞಾನ ಮುಂತಾದ ಮನುಷ್ಯನಲ್ಲಿ ಹುಟ್ಟುವ ಸಮಸ್ತ ಭಾವಗಳೆಲ್ಲವೂ ಈಶ್ವರನಿಂದಲೇ ಹುಟ್ಟುವುವು ವಿಶ್ವವ್ಯಾಪಿ ಯಾದ ಈಶ್ವರನ ಅಖಂಡ ಮನಸ್ಸಿನಲ್ಲಿ ಹುಟ್ಟುವ ಭಾವನೆಗಳು ವ್ಯಕ್ತಿಯ ಭಾವನೆಗಳಲ್ಲಿ ಎಂದು ಅರ್ಥ ಮಾಡಬೇಕು ಇಲ್ಲಿ ಹೇಳಿರುವ ಇಪ್ಪತ್ತು ಭಾವಗಳಲ್ಲಿ ನಾಲ್ಕುಮಾತ್ರ ಅಭಾವ ವಾಚಕ ಗಳು ಉಳಿದ ಹದಿನಾರು ಭಾವವಾಚಕಗಳು

ಸೃಷ್ಟಿಯ ಪ್ರಾರಂಭದೊಡನೆ ಅದರ ಈಶ್ವರತ್ವವೂ ಸಿದ್ಧ ವಾಗುತ್ತದೆ ದೇಶಕ್ಕೆ ರಾಜ ಅಥವಾ ಚಕ್ರವರ್ತಿಯಿದ್ದಂತೆ. ದೇಶದ ಯಾವ ಮೂಲೆಯಲ್ಲಿ ಏನು ನಡೆಯಬೇಕಾದರೂ ರಾಜನ ವಿಧಾನಕ್ಕೆ ಒಳಪಟ್ಟಿರಬೇಕು ಧನ, ಕನಕ, ವಸ್ತ್ರವಾಹನ ಮುಂತಾದ ಸುಖ

ವನ್ನು ಕೊಡುವ ಪದಾರ್ಥಗಳಂತೆಯೇ ದಂಡ, ಶಿಕ್ಷೆ, ಕಾರಾಗೃಹ ವಾಸ ಮುಂತಾದ ದುಃಖದಾಯಕ ವಸ್ತುಗಳೂ ರಾಜನ ಸಂವಿಧಾನದೊಳಗಿನವುಗಳೇ. ಅಲ್ಲದೇ ಯೋಗ್ಯರಾದವರಿಗೆ ಧರ್ಮಾತ್ಮರಾದವರಿಗೆ ಮಾನ-ಮರ್ಯಾದೆಗಳು ದೊರಕುವಂತೆ ಅಯೋಗ್ಯನಿಗೆ ಮೋಸಗಾರನಿಗೆ ದುಷ್ಟನಿಗೆ ಅವರವರ ಕರ್ಮಕ್ಕೆ ತಕ್ಕಂತೆ ಶಿಕ್ಷೆಯೂ ದಂಡವೂ ಕಾರಾಗೃಹವಾಸವೂ ದೊರೆಯಲೇ ಬೇಕು. ದುಷ್ಟಶಿಕ್ಷಣೆಯಾಗದಿದ್ದರೆ ದೇಶದಲ್ಲಿ ಶಿಕ್ಷೆಯಭಯವಿಲ್ಲದಿದ್ದರೆ ಪ್ರಜೆಗಳಿಗೆ ಸುಖವಾಗುವುದಿಲ್ಲ. ದೇಶವು ಅರಾಜಕವಾಗುತ್ತದೆ. ಆದುದರಿಂದ ಸೃಷ್ಟಿಕರ್ತನಾದ ಜಗತ್ಪ್ರಭುವಾದ ಪರಮಾತ್ಮನು ತನ್ನ ಲೋಕ ಮಹೇಶ್ವರತ್ವಯೋಗದಿಂದ ಜಗತ್ತಿನ ತುಂಬ ತನ್ನ ಅಧಿಕಾರವನ್ನು ಸ್ಥಾಪಿಸಿ ಆಳುತ್ತಾನೆ. ಸತ್ಪುರುಷನಿಗೆ ಒಳ್ಳೆಯ ಫಲಗಳನ್ನೂ ದುಷ್ಟನಿಗೆ ದುಃಖ ರೂಪ ಶಿಕ್ಷೆಯನ್ನೂ ಕೊಡುವ ನಿಯಮದಂತೆ ಒಳ್ಳೆಯ ಕೆಟ್ಟ ಎಲ್ಲ ಭಾವಗಳಿಗೂ ಅಧಿಪತಿಯಾಗಿ ಪ್ರತಿಯೊಬ್ಬರಿಗೂ ಅವರವರ ಕರ್ಮಕ್ಕೆ ತಕ್ಕಂತೆ ಫಲವನ್ನು ಕೊಡುತ್ತಿರುತ್ತಾನೆ.

ಈ ಇಪ್ಪತ್ತು ಭಾವಗಳಲ್ಲಿ 1 ಬುದ್ಧಿ 2 ಜ್ಞಾನ 3 ಅಸಂಮೋಹ 4 ಕ್ಷಮಾ 5 ಸತ್ಯ 6 ದಮ 7 ಶಮ ಇವು ಸಾತ್ವಿಕ ಮತ್ತು ಪಾರಲೌಕಿಕ ಭಾವಗಳು. ಇವುಗಳು ಮನುಷ್ಯನನ್ನು ಪರಮಾತ್ಮನಲ್ಲಿ ಸೇರಿಸುತ್ತವೆ.—

**1 ಬುದ್ಧಿ**—ನಿಶ್ಚಯಾತ್ಮಕವಾ ಅಂತಃಕರಣವೃತ್ತಿ. ಇದಕ್ಕೆ ಅತ್ಯಂತಸೂಕ್ಷ್ಮ ತತ್ವಗಳನ್ನು ಚೆನ್ನಾಗಿ ಗ್ರಹಿಸುವ ಶಕ್ತಿ ಇದೆ.

ಈ ಬುದ್ಧಿಯ ಸಹಾಯದಿಂದ ಸಂಸಾರವು ಅಸಾರವೆಂದೂ ಅಸತ್ಯ ಕ್ಷಣಭಂಗುರವೆಂದೂ ಪರಮಾತ್ಮನೊಬ್ಬನೇ ಶಾಶ್ವತ ನಶ್ಯ ಜನ್ಮರಹಿತ ಎಂದು ತಿಳಿಯಬಹುದು ಇದೂ ಗುಣಭೇದದಿಂದ ಸಾತ್ವಿಕ, ರಾಜಸ, ತಾಮಸ ಎಂದು ಮೂರು ಪ್ರಕಾರ ವಾಗುತ್ತದೆ

2 **ಜ್ಞಾನ**—ಸಾಮಾನ್ಯ ಮತ್ತು ವಿಶೇಷ ರೂಪದಲ್ಲಿ ವಸ್ತು ಪರಿಚಯ ಮಾಡಿಕೊಳ್ಳುವುದು ಜ್ಞಾನ ಘಟಪಟ ಜ್ಞಾನವು ವಸ್ತುವು ಹೇಗೆ ಕಾಣಬರುವುದೋ ಹಾಗೆಮಾತ್ರ ತಿಳಿಯುವ ಸಾಮಾನ್ಯ ಜ್ಞಾನ ಶಿಲ್ಪ, ಕುಶಲಕಲೆ ಮುಂತಾದವುಗಳು ವಿಶೇಷ ಜ್ಞಾನ. ಪ್ರತಿಯೊಂದು ವಸ್ತುವಿನಲ್ಲಿಯೂ ಪರಮಾತ್ಮ ನನ್ನು ತಿಳಿಯುವುದೂ ಆ ಭಾವನೆಯಿಂದಲೇ ನೋಡುವುದೂ ಯಥಾರ್ಥ ಜ್ಞಾನ

3 **ಅಸಂಮೋಹ**—ಅವಿದ್ಯೆಯಿಂದ, ಅಜ್ಞಾನದಿಂದ, ಉಂಟಾ ಗುವ ತಪ್ಪು ತಿಳಿವಳಿಕೆಯು ಮೋಹ ಇದು ದೃಢವಾಗಿದ್ದರೆ ಅದು ಸಂಮೋಹ. ಅಸತ್ಯವನ್ನೇ ಸತ್ಯವೆಂದೂ ಶತ್ರುವನ್ನು ಮಿತ್ರನೆಂದೂ ಹಾನಿಯನ್ನು ಲಾಭನೆಂದೂ ತಿಳಿಯುವುದು ಸಂಮೋಹ ದೇಹ ವನ್ನೇ ನಾನು ಎಂದು ತಿಳಿಯುವುದು, ಅದಕ್ಕೆ ಸಂಬಂಧಪಟ್ಟವು ಗಳನ್ನು ನನ್ನದು ಎಂದು ತಿಳಿಯುವುದು ಮೋಹ ಅದಿಲ್ಲದಿರು ವುದು ಅಸಂಮೋಹ

4 **ಕ್ಷಮೆ**—ಇತರರಿಂದ ತನ್ನ ದೇಹಕ್ಕೆ, ಮನಸ್ಸಿಗೆ ದುಃಖವಾಗು

ನಂತಾದರೆ ತಟ್ಟನೆ ಅವರ ಮೇಲೆ ಕ್ರೋಧವು ಹುಟ್ಟುತ್ತದೆ ಆ ಕ್ರೋಧವನ್ನು ತಡೆದು ಶಾಂತಿಯಿಂದ ಅವರ ತಪ್ಪನ್ನು ಮನ್ನಿಸುವ ಸ್ವಭಾವವು ಕ್ಷಮೆ ಎನ್ನಿಸಿಕೊಳ್ಳುತ್ತದೆ. ಧರ್ಮರಾಯನು ದ್ರೌಪದಿಗೆ ಕ್ಷಮೆಯ ವಿಷಯವಾಗಿ ತಿಳಿಸುವಾಗ,

**" ಯಾವ ತತ್ವವು ಅತ್ಯಂತ ಸೂಕ್ಷ್ಮವಾದುದೋ ಅದು ಕ್ಷಮೆಯಲ್ಲಿದೆ ದೊಡ್ಡದೊಡ್ಡ ಯಜ್ಞಗಳನ್ನು ಮಾಡಿದ ಫಲವು ಕ್ಷಮೆಯಲ್ಲಿದೆ. ಕ್ಷಮೆಯನ್ನು ಸಾಕ್ಷಾತ್ ಪರಬ್ರಹ್ಮಸ್ವರೂಪ ವೆಂದೇ ತಿಳಿಯಬೇಕು. ಭೂತ-ಭವಿಷ್ಯ ಜಪ-ತಪ ಶೌಚ ಮುಂತಾದವುಗಳೆಲ್ಲಾ ಕ್ಷಮೆಯೊಂದರಲ್ಲೇ ಅಡಗಿವೆ. ಇದೇ ಜಗತ್ತನ್ನು ಧಾರಣೆ ಮಾಡಿರುವುದು ಆದುದರಿಂದಲೇ ಭೂದೇವಿಯನ್ನು ' ಕ್ಷಮಾ ' ಎಂದು ಕರೆಯುತ್ತಾರೆ. ಇದನ್ನು ತ್ಯಾಗಮಾಡುವುದು ಹೇಗೆ ಸಾಧ್ಯ ?**

ಎಂದು ಇದನ್ನು ಹೊಗಳಿದ್ದಾನೆ.

5 **ಸತ್ಯ**—ಕಂಡದ್ದನ್ನು ಕಂಡಹಾಗೆಯೇ ಕೇಳಿದ್ದನ್ನು ಕೇಳಿದ ಹಾಗೆಯೇ ಅನುಭವವಾದುದನ್ನು ಅನುಭವವಾದಹಾಗೆಯೇ ಹೇಳುವುದು. ಇದರ ಮರ್ಮವು ಬಹಳ ಸೂಕ್ಷ್ಮ ಸತ್ಯವಾದುದು ನಿಜ ವಾಗಿರುವುದರ ಜೊತೆಗೆ **ಅತ್ಯಂತ ಭೂತಹಿತ** ( ಪ್ರಾಣಿಗಳಿಗೆ ಜನಗಳಿಗೆ ಹಿತಕರ) ವಾಗಿರಬೇಕು

6 **ದಮ**—ಬಾಹ್ಯೇಂದ್ರಿಯ ನಿಗ್ರಹ ವಿಷಯಗಳ ಕಡೆಗೆ ಓಡುವ ಮನಸ್ಸನ್ನು - ಇಂದ್ರಿಯಗಳನ್ನು ತಡೆದು ನಿಲ್ಲಿಸುವುದು

ಕಟ್ಟಕೆಲಸಗಳನ್ನು ಮಾಡಲು ಪ್ರೇರೇಪಿಸುವ ಚಿತ್ತವನ್ನು ನಿರೋಧ ಮಾಡುವುದು ದಮ. **' ಮನಸೈವೇಂದ್ರಿಯಗ್ರಾಮಂ ವಿ ನಿ ಯಮ್ಯ ಸಮಂತತಃ '** ಮನಸ್ಸನ್ನು ಇಂದ್ರಿಯಗಳಿಂದ ತಡೆ ಯುವುದು. **' ಶನೈಃಶನೈರುಪರಮೇತ್ '** ಸ್ವಲ್ಪಸ್ವಲ್ಪವಾಗಿ ತಡೆ ಯುತ್ತಾ ಬರಬೇಕು.

**7 ಶಮ**—ಅಂತರಿಂದ್ರಿಯವನ್ನು-ಅಂತಃಕರಣವನ್ನು ತಡೆದು ನಿಲ್ಲಿಸುವುದು. ಅಂದರೆ, ಮ ನ ಸ್ಸು, ಬುದ್ಧಿಗಳು ವಿಷಯಗಳ ಕಡೆಗೆ ಹೋಗದಂತೆ ಚಂಚಲವಾಗದಂತೆ ನಿಲ್ಲಿಸಬೇಕು.

ಆರನೇ ಅಧ್ಯಾಯದ ಮೂರನೇ ಶ್ಲೋಕದಲ್ಲಿ **'ಸರ್ವಕರ್ಮ ನಿವೃತ್ತಿರೂಪವಾದ ಶಮೆಯೇ ಯೋಗಾರೂಢಸ್ಥಿತಿಯನ್ನು ಪಡೆ ಯಲು ಕಾರಣವಾಗುತ್ತದೆಂದು'** ಹೇಳಲ್ಪಟ್ಟಿದೆ.

ಇನ್ನು 8) ಸುಖ- 9) ದುಃಖ 10) ಭಾವ- 11) ಅಭಾವ 12) ಭಯ- 13) ಅಭಯ. ಇವುಗಳು ಜೊ ತೆ ಜೊ ತೆ ಯಾಗಿ ಹುಟ್ಟುವ ದ್ವಂದ್ವಗಳು. ಅಥವಾ ಒಂದೇಅನುಭವದ ಭಿ ನ್ನ ಭಿನ್ನ ದೃಷ್ಟಿಕೋಣಗಳ ಅನುಭವಗಳು. ಇ ವು ಗ ಳು ಕೂ ಡಾ ಪರಮಾತ್ಮನಿಂದಲೇ ಪ್ರಾಣಿಗಳಿಗೆ ಆಗುವುವು,

8 **ಸುಖ** 9 **-ದುಃಖ**—ಮನಸ್ಸಿಗೆ ಅನುಕೂಲವಾಗಿ-ಸಂ ತೋಷಕರವಾಗಿ ಕಾಣುವ ವಸ್ತುವಿನ ಪ್ರಾಪ್ತಿಯಿಂದ ಉಂಟಾಗುವ ಆನಂದವು ಸುಖ. (ಅನುಕೂಲವೇದನೀಯಂ ಸುಖಂ) ಇಂದ್ರಿಯ ಗಳಿಗೆ ಅನುಕೂಲವಾಗಿ ಪ್ರಾಪ್ತವಾಗುವ ಸಂಬಂಧವು ಸುಖ.

'ಪ್ರತಿಕೂಲವೇದನೀಯಂ ದುಃಖಂ' ಪ್ರತಿಕೂಲವಾಗಿ-ಮನಸ್ಸಿಗೆ ಬೇಡವಾಗಿ ತೋರಿಬರುವ ಅನುಭವವು 'ದುಃಖ' ಒಂದೇ ವಸ್ತುವಿನಿಂದ ಒಂದಾನೊಂದು ಕಾಲದಲ್ಲಿ ಸುಖವು ಅನುಭವವಾಗಬಹುದು ಮತ್ತೊಂದು ಕಾಲದಲ್ಲಿ ಅದೇ ವಸ್ತುವಿನ ಸಂಬಂಧವು ದುಃಖರೂಪವಾಗಿ ಅನುಭವವಾಗಬಹುದು ಅಥವಾ ಒಂದು ವಸ್ತುವು ಒಂದು ಪ್ರಮಾಣದಲ್ಲಿ ಸುಖಕರವಾಗಿ ಕಂಡುಬಂದು ಮತ್ತೊಂದು ಪ್ರಮಾಣದಲ್ಲಿ ದುಃಖಕರವಾಗಬಹುದು'

ಸುಖದುಃಖರೂಪವಾದ ದ್ವಂದ್ವಗಳ ಮೀಮಾಂಸೆಯು ಮಹನೀಯರಿಂದ ವಿವಿಧವಾಗಿ ವ್ಯಾಖ್ಯಾನ ಮಾಡಲ್ಪಟ್ಟಿದೆ ಹಾಗೆಯೇ ಸುಖವನ್ನು ಸಾತ್ವಿಕ, ರಾಜಸ, ತಾಮಸ, ಎಂದು ವಿಂಗಡಿಸಿದ್ದಾರೆ

ಮನಸ್ಸಿಗೆ ವಿಶೇಷ ಸಂತಾಪವನ್ನು ಉಂಟುಮಾಡುವುದು ದುಃಖವೆನ್ನಲ್ಪಡುತ್ತದೆ ಅಧರ್ಮಜನ್ಯವಾದುದು ನಮಗೆ ಪ್ರತಿಕೂಲವಾಗಿರುವುದು ಪಾಪಕ್ಕೆ ಕಾರಣವಾಗುತ್ತದೆ ನಮಗೆ ದುಃಖರೂಪವಾದ ಕರ್ಮವು ಪ್ರಾಪ್ತವಾಗಬೇಕಾದಾಗ ಜಗತ್ತಿನಲ್ಲಿರುವುದೆಲ್ಲವೂ ದುಃಖವನ್ನು ಕೊಡುವವುಗಳಾಗುತ್ತವೆ ಇದು ಪಾಪಕರ್ಮದಫಲವಾಗಿ ಬರುವುದು ಎಲ್ಲಕ್ಕಿಂತಲೂ ದೊಡ್ಡ ದುಃಖವು ಜನ್ಮದುಃಖವು ಮರಣವು ಸಹಾ ಹಾಗೆಯೇ ದುಃಖರೂಪಫಲವುಳ್ಳದು '**ಕವಿಕಲ್ಪಲತಾ**' ಎಂಬ ಗ್ರಂಥದಲ್ಲಿ ವಿಶೇಷ ದುಃಖಗಳ ಸ್ವರೂಪವನ್ನು ವರ್ಣಿಸಿದೆ ಅದನ್ನು ವಾಚಕರ ಅನುಕೂಲಕ್ಕಾಗಿ ಈ ಕೆಳಗೆ ಕೊಡುತ್ತಿದ್ದೇವೆ

೧ ) ಪಾರತಂತ್ರ್ಯ— ಇತರರ ಅಧೀನದಲ್ಲಿರುವುದು.

೨ ) ಆಧಿ. — ಮನಸ್ಸಿನ ದುಃಖ.

೩ ) ವ್ಯಾಧಿ.—ಶರೀರದ ದುಃಖ ( ರೋಗ ಮುಂತಾದವು )

೪ ) ಮಾನಚ್ಯುತಿ— ( ಅಪಮಾನವಾಗುವಿಕೆ )

೫ ) ಶತ್ರು

೬ ) ಕುಭಾರ್ಯಾ ( ದುಷ್ಟಳಾದ ಹೆಂಡತಿ. )

೭ ) ರಿಕ್ತತಾ— ( ಧನಹೀನನಾಗಿರುವುದು. )

೮ ) ಕುಗ್ರಾಮವಾಸ.

೯ ) ಕುಸ್ವಾಮಿಸೇವಾ.

೧೦ ) ಬಹುಕನ್ಯಾ— ಹೆಚ್ಚು ಹೆಣ್ಣುಮಕ್ಕಳಾಗುವುದು.

೧೧ ) ವೃದ್ಧತ್ವಂ— ಮುದುಕತನ.

೧೨ ) ಪರಗೃಹವಾಸ.— ( ಪರರ ಮನೆಯಲ್ಲಿ ವಾಸಮಾಡು (ವುದು.

೧೩ ) ವರ್ಷಾಪ್ರವಾಸ— ಮಳೆಗಾಲದಲ್ಲಿ ಪರಸ್ಥಳದಲ್ಲಿ ವಾಸಮಾಡುವುದು.

೧೪ ) ಭಾರ್ಯಾದ್ವಯಂ— ಇಬ್ಬರು ಹೆಂಡತಿಯರಿರುವುದು.

೧೫ ) ಕುಭೃತ್ಯ— ಮೂರ್ಖ–ಕೆಟ್ಟ ಸೇವಕನಿರುವುದು

೧೬ ) ಕೆಟ್ಟ ನೇಗಿಲಿನಲ್ಲಿ ಕೃಷಿಮಾಡುವುದು.

ಇವುಗಳು ಸಜ್ಜನರಿಗೆ ಬಹಳ ದುಃಖವನ್ನು ಕೊಡುವುವು.

10 **ಭಾವ** 11 **ಅಭಾವ**— ಸೃಷ್ಟಿಯ ಪ್ರಾರಂಭದಲ್ಲಿ ಪ್ರಾಣಿಗಳು ಹುಟ್ಟುವಿಕೆಯು ಭಾವ ಎನ್ನಲ್ಪಡುತ್ತದೆ. ಪ್ರಳಯಕಾಲದಲ್ಲಿ ನಾಶವಾಗುವುದು ಅಭಾವ ಎನ್ನಲ್ಪಡುತ್ತದೆ. ಅಥವಾ ಜನ್ಮ-ಮರಣಗಳು ಭಾವ-ಅಭಾವ ಎನ್ನಿಸಿಕೊಳ್ಳಲ್ಪಡುತ್ತವೆ.

12 **ಭಯ** 13 **ಅಭಯ**— ಭಯವೆನ್ನುವುದು ಹೆದರಿಕೆ, ಇತರರ ಕ್ರೋಧದ ಫಲವಾಗಿ ಹುಟ್ಟಬಹುದು. ಎಲ್ಲಕ್ಕಿಂತಲೂ ದೊಡ್ಡದು ಪ್ರಾಣಭಯವು. ಭಯಕ್ಕೆ ಎದುರಾದುದು ಅಭಯ ಈಶ್ವರನು ಸರ್ವವ್ಯಾಪಿಯೆಂದು ತಿಳಿದು ಎಲ್ಲವೂ ಆತನ ರೂಪವೇ. ಎಂದು ಭಾವಿಸಿದಾಗ ಎಲ್ಲ ಪ್ರಾಣಿಗಳಲ್ಲಿಯೂ ಪ್ರೇಮವು ಉತ್ಪನ್ನವಾದಾಗ ಅಭಯ ವೃತ್ತಿಯು ಉದಯವಾಗುತ್ತದೆ. ಉಳಿದ ಏಳು 14. ಅಹಿಂಸೆ, 15. ಸಮತೆ, 16. ತುಷ್ಟಿ, 17. ತಪಸ್ಸು, 18. ದಾನ, 16. ಯಶಸ್ಸು, 20. ಅಪಯಶಸ್ಸುಗಳು ಈ ಕೆಳಗೆ ವರ್ಣಿಸಲ್ಪಡುತ್ತವೆ.

14 **ಅಹಿಂಸೆ**— ಹಿಂಸೆ ಮಾಡದಿರುವಿಕೆ. ಯಾವುದಾದರೊಂದು ಪ್ರಾಣಿಯ ದೇಹಕ್ಕೆ ತೊಂದರೆಯನ್ನುಂಟುಮಾಡುವುದು ಹಿಂಸೆ. ಅದಿಲ್ಲದಿರುವುದು ಅಹಿಂಸೆ. ಅಹಿಂಸೆಯು ಧರ್ಮದ ಮೊದಲನೆಯ ಅಂಶ.

15 **ಸಮತೆ**— ರಾಗದ್ವೇಷಗಳನ್ನು ತೊಡೆದುಹಾಕಿ ಶತ್ರು-ಮಿತ್ರ, ಮಾನ-ಅಪಮಾನ, ಲಾಭ-ನಷ್ಟ ಜಯ-ಅಪಜಯ ಹರ್ಷ-ಶೋಕ, ಶೀತ-ಉಷ್ಣ, ಸುಖ-ದುಃಖ ರೂಪ ದ್ವಂದ್ವಗಳನ್ನು ಸಮಾನವಾಗಿ ತಿಳಿದು ಅನುಭವಿಸುವುದೇ ಸಮತೆ ಎನ್ನಿಸಿಕೊಳ್ಳು

ತ್ತದೆ ಈ ಸಮತ್ವವು ಸಾಮಾನ್ಯವಾಗಿ ಲಭ್ಯವಾಗುವುದಿಲ್ಲ ಬಹುಕಾಲ ನಿಷ್ಕಾಮವಾಗಿ ದೇಹೇಂದ್ರಿಯ ಮನಸ್ಸುಗಳನ್ನು ಕರ್ಮಕ್ಷೇತ್ರಕ್ಕೆ ಹಾಕಿ ಅಂತಃಕರಣಶುದ್ಧಿಯಾಗಿ ಪರಮಾತ್ಮನ ಅನುಗ್ರಹವಾದರೆ ಮಾತ್ರ ನಮಗೆ ಈ **ಸಮತಾ** ಗುಣವು ಲಭ್ಯ.

16 ) **ತುಷ್ಟಿ**— ಯಾವಾಗ ಎಷ್ಟು ನಮ್ಮ ಭೋಗಕ್ಕೆ ಒದಗುತ್ತದೆಯೋ ಅಷ್ಟರಲ್ಲಿಯೇ ತೃಪ್ತಿಯನ್ನು ಅನುಭವಿಸುವುದೂ ಹೆಚ್ಚಾಗಿ ಆಶೆ ಪಡದಿರುವುದೂ ' **ತುಷ್ಟಿ** ' ಎನ್ನಿಸಿಕೊಳ್ಳುವುದು ಈ ತುಷ್ಟಿ ಅಥವಾ ಸಂತೋಷವು ಬಲುದೊಡ್ಡ ಪುಣ್ಯದ ಫಲವು.

17 ) **ತಪಸ್ಸು**— ಇಂದ್ರಿಯಗಳನ್ನು ನಿಗ್ರಹಮಾಡಿ ಪರಮಾತ್ಮ ಪ್ರಾಪ್ತಿಗಾಗಿ ಶರೀರವನ್ನೇ ಕ್ಲೇಶಕ್ಕೆ ಒಳಪಡಿಸಿ ಮೌನ ಕೃಚ್ಛ್ರ ಚಾಂದ್ರಾಯಣ ಮುಂತಾದ ವ್ರತಗಳನ್ನು ಮಾಡುವುದು ತಪಸ್ಸು. ಇದು ಕಾಯಕ, ವಾಚಕ, ಮಾನಸಿಕ ಎಂದು ಮೂರು ವಿಧವಾಗಿದೆ ಹದಿನೇಳನೆಯ ಅಧ್ಯಾಯದಲ್ಲಿ ಇದರ ಸಂಪೂರ್ಣ ವರ್ಣನೆಯಿದೆ

18 **ದಾನ**— ದೇಶ, ಕಾಲಾನುಸಾರ, ಸತ್ಪಾತ್ರನಾದವನಿಗೆ ಧನ, ವಸ್ತ್ರ, ಆಹಾರ ಮುಂತಾದವುಗಳನ್ನು ಕೊಡುವುದು ದಾನ* ಇವರ ಸಂಪೂರ್ಣ ವಿವರಣೆಯನ್ನು ಹದಿನೇಳನೆಯ ಅಧ್ಯಾಯ

---

*** " ದಾನ " ಎಂಬ ಹೆಸರಿನ ಪುಟ್ಟ ಪುಸ್ತಕವು ಇದರ ಸಂಪೂರ್ಣ ಸ್ವರೂಪ, ಲಕ್ಷಣ, ಪ್ರಯೋಜನಗಳನ್ನು ವರ್ಣಿಸುತ್ತದೆ ಆಶ್ರಮದಿಂದಲೇ ಪ್ರಕಟವಾಗಿರುವ ಕಥಾರೂಪಗ್ರಂಥ**

ದಲ್ಲಿ ಕಾಣಬಹುದು. ದೀನ, ದರಿದ್ರ, ದುಃಖೀ ಅಂಗವಿಹೀನ ರೂಪೀ ನಾರಾಯಣ ಸೇವೆಯು ದಾನದ ಅತ್ಯಂತ ಮುಖ್ಯವಾದ ಅಂಗ. ಇದನ್ನು ಸಾಮಾನ್ಯವಾಗಿ ನಾಲ್ಕುರೂಪವಾಗಿ ವಿಂಗಡ ಮಾಡಬಹುದು. **1 ನಿತ್ಯ 2 ನೈಮಿತ್ತಿಕ 3 ಕಾಮ್ಯ 4 ವಿಮಲ** ಎಂದು.

1 ) ದೀನದರಿದ್ರದುಃಖೀರೂಪ ನಾರಾಯಣ ಸೇವೆಯನ್ನು ಯಥಾಶಕ್ತಿ ಸದಾ ಮಾಡುವುದು ನಿತ್ಯದಾನ.

2 ) ಪಾಪಕರ್ಮಗಳ ಪರಿಹಾರಕ್ಕಾಗಿ ಮಾಡುವ ದಾನವು ನೈಮಿತ್ತಿಕ ದಾನವು.

3 ) ಪುತ್ರಪ್ರಾಪ್ತಿ, ಸ್ವರ್ಗಪ್ರಾಪ್ತಿ ಮುಂತಾದ ಉದ್ದೇಶ ಗಳಿಂದ ಮಾಡಲ್ಪಡುವುದು ಕಾಮ್ಯದಾನ.

4 ) ಧರ್ಮಭಾವನೆಯಿಂದ ಈಶ್ವರ ತೃಪ್ತಿಗಾಗಿ ದಾನ. ಮಾಡುವುದು ವಿಮಲ ದಾನ. ಇದೇ ಎಲ್ಲಕ್ಕಿಂತಲೂ ಶ್ರೇಷ್ಠ ಕಲ್ಯಾಣಕಾರಿಯಾದುದು.

19 ) **ಯಶಸ್ಸು**— ಧರ್ಮ ಮತ್ತು ಪರೋಪಕಾರ ಮಾಡುವ ವರು ಬದುಕಿರುವಾಗಲೇ ಲೋಕದಿಂದ ಹೊಗಳಲ್ಪಡುವುದು **ಯಶಸ್ಸು.** ಮರಣಾನಂತರ ಬರುವ ಈ ಹೊಗಳಿಕೆಯು **ಕೀರ್ತಿ** ಎನ್ನಿಸಿಕೊಳ್ಳಲ್ಪಡುವುದು, ಎಂದು ಕೆಲವರ ಮತ. ಮತ್ತೆ ಕೆಲ ವರು ದಾನಾದಿ ಸತ್ಕರ್ಮಗಳನ್ನುಮಾಡಿದವನನ್ನು ಕೀರ್ತಿವಂತ ನೆಂದೂ ಶೌರ್ಯ ಮುಂತಾದ ಸಾಹಸ ಕಾರ್ಯಗಳನ್ನು ಮಾಡು ವವನನ್ನು ಯಶಸ್ವಿಯೆಂದೂ ಅಭಿಪ್ರಾಯ ಪಡುತ್ತಾರೆ.

20 ) **ಅಯಶಸ್ಸು**— ಅಧರ್ಮದ ಫಲವಾಗಿ ಬರುವ ನಿಂದೆ, ದುಃಖ, ಅವಮಾನ ಮುಂತಾದುವೆಲ್ಲಾ ಅಯಶಸ್ಸು-

ಈರೀತಿಯಾಗಿ ಇಪ್ಪತ್ತು ಭಾವಗಳನ್ನು ವರ್ಣನೆ ಮಾಡಿ '**ಮತ್ತ ಏವ ಪೃಥಗ್ವಿಧಾಃ**' ಎಂದು ಜನಗಳಿಗೆ ಅವರವರ ಕರ್ಮದ ಫಲವಾಗಿ ನನ್ನಿಂದಲೇ ಉಂಟಾಗುವುವೆಂದು ಭಗವಂತನು ಹೇಳುತ್ತಾನೆ.

ಭಗವಂತನು ಲೋಕಮಹೇಶ್ವರನು. ಅವನು ಸಗುಣನೂ ಅಹುದು. ನಿರ್ಗುಣನೂ ಅಹುದು. ನಿರ್ಗುಣ, ನಿರ್ವಿಕಲ್ಪ, ನಿರಂಜನ, ನಿಷ್ಕಲಂಕ ಮುಂತಾದವು ಅವನ ಸಹಜ ಸ್ಥಿತಿಯ ವರ್ಣನೆಯಾದರೆ, ಈಶ್ವರ, ತ್ರಿಮೂರ್ತ್ಯಾತ್ಮಕ, ತ್ರಿಗುಣಾತ್ಮಕ, ಜಗದೀಶ, ಮಾಯಾಧೀಶ ಮುಂತಾದವು ಅವನ ಸಗುಣ-ಸಾಕಾರ ಸ್ಥಿತಿಯ ವರ್ಣನೆಗಳು. '**ಸೋಕಾಮಯತ ಬಹುಸ್ಯಾಂ ಪ್ರಜಾಯೇಯೆತಿ**' "ನಾನು ಬಹುವಾಗಿ ಪ್ರಕಟನಾಗಬೇಕು." ಎಂದು ಸಂಕಲ್ಪಿಸಿದೊಡನೆಯೇ ಜಗತ್ತು ಪ್ರಕಟವಾಯಿತು. ಅಂದರೆ ಅವನ ಅನಿರ್ವಚನೀಯ ಗುಣ ಸ್ವಭಾವಯುಕ್ತ ಶಕ್ತಿಯು ಪ್ರಕಟವಾಯಿತು. ಆ ಶಕ್ತಿಯೇ ಜಗತ್ತನ್ನು ಆಳುತ್ತಿರುವವಳು. ಜಗನ್ನಾಟಕ ಸೂತ್ರಧಾರಿಣಿ. ಆದುದರಿಂದ ಲೋಕಮಹೇಶ್ವರನಾದ ದೇವನು ಜಗತ್ತಿನ ತಂದೆಯೆಂದೂ ಆತನ ಮಾಯಾಶಕ್ತಿಯು ಜಗತ್ತಿನ ತಾಯಿ ಎಂದೂ ಕರೆಯಲ್ಪಡುತ್ತಿದ್ದಾರೆ. ಜಗತ್ತಿನ ವ್ಯವಹಾರವೆಲ್ಲಾ ಕ್ರಮಬದ್ಧವಾಗಿದೆ. ರಾಜನ ನಿಯಮಕ್ಕೆ-ಕಟ್ಟಳೆಗಳಿಗೆ ದೇಶವು ಒಳಪಟ್ಟಿರುವಂತೆ ಮಾಯಾಶಕ್ತಿಯ ಪ್ರಕೃತಿ ನಿಯಮಕ್ಕೆ ಎಲ್ಲವೂ

ಸೃಷ್ಟಿ ಸ್ಥಿತಿ ಲಯಗಳೂ ಒಳಪಟ್ಟಿರುವುದರಿಂದ ಸಾತ್ವಿಕೀ ರಾಜಸೀ ತಾಮಸೀ ಪ್ರಕೃತಿಯ ಗುಣಗಳಿಂದ ಮೋಹಿತರಾಗಿ ಕರ್ಮ ಪ್ರವಾಹದಲ್ಲಿ ತೇಲಿಹೋಗುತ್ತಿರುವ ಜೀವರಾಶಿಗಳು ತಂ ತಮ್ಮ ಕರ್ಮಕ್ಕೆ ತಕ್ಕ ಫಲವನ್ನು ಅನುಭವಿಸುವ ಸಂವಿಧಾನವು ಯಥಾ ವಿಧಿಯಾಗಿ ಅನುಸರಿಸಲ್ಪಡಲೇಬೇಕು. ನ್ಯಾಯಾಧಿಪತಿಯು ಶಿಷ್ಟರಿಗೆ ಪುರಸ್ಕಾರವನ್ನು ದುಷ್ಟರಿಗೆ ಶಿಕ್ಷೆಯನ್ನೂ ಕೊಡುವ ನಿಯಮ ದಂತೆ ಒಳ್ಳೆಯ-ಕೆಟ್ಟ ಎಲ್ಲ ಭಾವಗಳೂ ಈಶ್ವರೀ ನಿಯಮ ದಂತೆಯೇ ಉತ್ಪನ್ನವಾಗಿ ಜಗತ್ತನ್ನು ಆಳುತ್ತವೆ. ಈಶ್ವರನು ಸ್ವತಃ ನಿರ್ಗುಣ ನಿರ್ವಿಕಲ್ಪನಾದರೂ ತನ್ನ ಮಾಯೆಯ ಅಧಿಷ್ಠಾನ ದಿಂದ ಸಗುಣ ಸಾಕಾರನಾಗಿ ಜಗದೀಶನಾಗುತ್ತಾನೆ. ಇದು ಆತನ ಲೋಕಮಹೇಶ್ವರತ್ವ.

" ನನ್ನಲ್ಲಿಯೇ ಭಾವವುಳ್ಳವರಾಗಿರುವ ಸಪ್ತಮಹರ್ಷಿಗಳು ಅವರಿಗಿಂತ ಹಿಂದಿನ ನಾಲ್ವರು (ಹದಿನಾಲ್ಕು) ಮನುಗಳು ಇವರುಗಳು ನನ್ನ ಮನಸ್ಸಿನಿಂದ-ಸಂಕಲ್ಪದಿಂದ ಹುಟ್ಟಿದ್ದಾರೆ ಈ ಜಗತ್ತೆಲ್ಲವೂ ಅವರ ಪ್ರಜೆಗಳೇ " ಎಂದು ಆರನೆಯ ಶ್ಲೋಕದಲ್ಲಿ ಪರಮಾತ್ಮನು ಹೇಳುತ್ತಾನೆ.

ಮರೀಚಿ, ಅಂಗಿರಾ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಈ ಏಳು ಜನ ಬ್ರಹ್ಮನ ಮಾನಸ ಪುತ್ರರಾದ ಮಹರ್ಷಿ ಗಳು. ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ ಎಂಬ ಈ ನಾಲ್ವರು ಬ್ರಹ್ಮನ ಮಾನಸ ಪುತ್ರರೇ. ಬ್ರಹ್ಮನು ಸೃಷ್ಟಿಯ ಸಂಕಲ್ಪಮಾಡಿದಾಗ ಮುಂಚೆ ಅತನ ಸಂಕಲ್ಪದಿಂದ ಸನಕ,

ಸನಂದನಾದಿ ನಾಲ್ವರು ಹುಟ್ಟಿದರು. ಬ್ರಹ್ಮನು ಸೃಷ್ಟಿಕಾರ್ಯಕ್ಕೆ ಅವರನ್ನು ಆಜ್ಞಾಪಿಸಲು ಆಜನ್ಮ ವೈರಾಗ್ಯಶಾಲಿಗಳಾದ ಅವರು ಒಪ್ಪಲಿಲ್ಲ. ಬ್ರಹ್ಮಚರ್ಯವ್ರತದಿಂದಲೇ ತಪಸ್ಸುಮಾಡಲು ಇಚ್ಛಿಸಿದರು. ಇವರು ಸೃಷ್ಟಿಯ ವಿಸ್ತಾರಕ್ಕೆ ಉಪಯೋಗವಿಲ್ಲವೆಂದು ತಿಳಿದನಂತರ ಈ ಸಪ್ತಮಹರ್ಷಿಗಳ ಸೃಷ್ಟಿಯಾಯಿತು ಅವರು ಅನೇಕ ಪತ್ನೀಪುತ್ರರುಗಳಿಂದೊಡಗೂಡಿ ಸೃಷ್ಟಿಯನ್ನು ವಿಸ್ತರಿಸಿ ಅಭಿವೃದ್ಧಿಪಡಿಸಿದರು. ಸನಕ, ಸನಂದನಾದಿಗಳು ಅಖಂಡ ಬ್ರಹ್ಮಚರ್ಯ ವ್ರತದಿಂದ ಜಗತ್ತಿನಲ್ಲಿ ಸಂಚರಿಸುತ್ತಾ ಭಕ್ತಿ, ಜ್ಞಾನ, ವೈರಾಗ್ಯಾದಿಗಳನ್ನು ಪ್ರಚಾರ ಮಾಡಿದರು.

ಪ್ರಕೃತಿ-ಪುರುಷರೂಪಶಕ್ತಿಗಳ ಪರಸ್ಪರ ಮಿಲನದಿಂದ ಹುಟ್ಟಿ ವೃದ್ಧಿಯಾಗುತ್ತಿರುವುದು ಜಗತ್ತು. ಹುಟ್ಟುವಿಕೆಗೆ ಎರಡು ಶಕ್ತಿಗಳು ಒಟ್ಟಿಗೆ ಸೇರಲೇಬೇಕು. ಆ ಸೇರುವಿಕೆಯಿಂದ ಮೂರನೆಯದರ ಉತ್ಪತ್ತಿ. ಹೀಗೆ ಒಂದು ಎರಡಾಗಿ ಅದು ಅನಂತವಾಗಿ ಒಂದು ಬೀಜದಿಂದ ವೃಕ್ಷ, ವೃಕ್ಷದಿಂದ ಅನಂತ ಬೀಜಗಳು ಹೀಗೆ ವೃದ್ಧಿಯಾಗುತ್ತಿರುವುದು ಜಗನ್ನಾಟಕ. ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿಗಳೆಂಬ ಪಂಚಭೂತಗಳು ವಿವಿಧ ಪ್ರಮಾಣದಲ್ಲಿ ಸೇರಿದಾಗ ಸ್ಥೂಲ ಸೂಕ್ಷ್ಮ ಜಗತ್ತು ಸೃಷ್ಟಿಯಾಗುವುದು. *ಉದ್ಭಿಜ, ಅಂಡಜ, ಸ್ವೇದಜ. ಜರಾಯುಜರೂಪ ದೇಹಗಳೊಳಗೆ ವಿವಿಧ ಜೀವರುಗಳನ್ನು ಅವರವರ ಕರ್ಮಕ್ಕೆ ತಕ್ಕಂತೆ ತುಂಬಿ ಜಗನ್ನಾಟಕ ಸೂತ್ರಧಾರಿಣಿಯಾದ ಮಾಯಾದೇವಿಯು ಕಳುಹಿಸುತ್ತಿರುವಳು.

ಸೃಷ್ಟಿಯು ಅದ್ಭುತವು ವಿಸ್ತಾರವಾಗಿದೆ. ಅದರೊಡನೆಯೇ ಆ ವಿಸ್ತಾರದಲ್ಲಿಯೇ ಜೀವಿಗಳ ಅಪಾರ ಕರುಣೆಯೂ ಬೆರಕೆಯಾಗಿದೆ.

ಜೀವಾತ್ಮನ ನಿಜವಾದ ಸ್ವರೂಪವು ಸಚ್ಚಿದಾನಂದ. ಸತ್ ಎಂದರೆ ಶಾಶ್ವತ. ಚಿತ್ ಎಂದರೆ ತೇಜಸ್ಸು, ಶಕ್ತಿ, ಬಲ, ಪ್ರಕಾಶ. ಆನಂದ ಎಂದರೆ ಸುಖ. ಜೀವಾತ್ಮನು ಶಾಶ್ವತನು. ತೇಜೋಮಯನು. ಸುಖಸ್ವರೂಪನು. ಆದರೆ ಮಾಯೆಯ ಮೋಹಕ್ಕೆ ಪ್ರಕೃತಿಯ ಗುಣಗಳೊಳಗೆ ಸಿಕ್ಕಿಬಿದ್ದುದರಿಂದ ತನ್ನ ಆನಂದವನ್ನು ಪ್ರಕೃತಿಯ ಗುಣಗಳಲ್ಲಿ – ಇಂದ್ರಿಯ ವಿಷಯ ಸುಖಗಳಲ್ಲಿ ಹುಡುಕಲೆತ್ನಿಸುತ್ತಾನೆ. ಅವುಗಳಲ್ಲಿಯೂ ಪ್ರೇಮದ ಛಾಯೆಯು ತೋರುವುದರಿಂದ ಅಲ್ಪಸ್ವಲ್ಪ ಸುಖವು ಸಿಕ್ಕಿದಂತಾಗಿ ಆದರಿಂದ ತೃಪ್ತಿಯಾಗದೆ, ಸುಖಕ್ಕಾಗಿ ಮತ್ತೊಂದು ವಿಷಯವನ್ನು ಹುಡುಕಿಕೊಂಡು ಹೋಗುತ್ತಾನೆ. ಆದುದರಿಂದ ಆತನ ತೃಷ್ಣೆಯು (ಆಶೆಯು) ಹೆಚ್ಚಾಗುತ್ತದೆ. ಲೋಭಿಯು ಲೋಭದಲ್ಲಿ, ಕಾಮಿಯು ಕಾಮದಲ್ಲಿ, ದುಷ್ಟನು ದುಷ್ಟತ್ವದಲ್ಲಿ, ಹೀಗೆ ಅಜ್ಞಾನವಶನಾಗಿ ಯಥಾರ್ಥವನ್ನು ತಿಳಿಯದೆ ಅಶಾಶ್ವತ ವಸ್ತುಗಳಲ್ಲಿ ಪ್ರೇಮಾನಂದವನ್ನು ಹುಡುಕುತ್ತಾ ಸುಖದ ಸ್ಥಾನದಲ್ಲಿ ದುಃಖವನ್ನು ಹೊಂದುತ್ತಿರುತ್ತಾನೆ. ಜನ್ಮದಿಂದ ಮರಣಕ್ಕೆ, ಮರಣದಿಂದ ಜನ್ಮಕ್ಕೆ ತಿರುಗುತ್ತಿರುತ್ತಾನೆ. ಇದೇ ಸಂಸಾರಚಕ್ರ.

ತತ್ವತಃ ಪರಮಾತ್ಮನ ಅಂಶರೂಪವೇ ಆದ ಜೀವಾತ್ಮನು ತನ್ನ ಪವಿತ್ರ-ಉಚ್ಚಸ್ಥಾನದಿಂದ ಜಾರಿ ಇಂದ್ರಿಯ ವಿಷಯಭೋಗ ರೂಪೀ ಮಾಯಾಜಾಲಕ್ಕೆ ಸಿಕ್ಕಿ ಕರ್ಮಪ್ರವಾಹದಲ್ಲಿ ತೇಲಿಹೋಗು ತ್ತಿರುವಾಗ ಆತನನ್ನು ಮೇಲಕ್ಕೆ ಹಿಡಿದೆತ್ತಿ ಉದ್ಧರಿಸುವುದಕ್ಕಾಗಿಯೇ ಜಗದ್ರೂಪೀ ಸೃಷ್ಟಿಯ ರಚನೆಯಾಗಿರುವುದು. ಈ ಉದ್ದೇಶ್ಯ ವನ್ನು ಸಾರ್ಥಕಮಾಡಿಕೊಳ್ಳಲು ಅನುಕೂಲಿಸುವಂತೆ ಜಗತ್ತಿನ ಜೀವರಾಶಿಗಳಲ್ಲಿ ಎಲ್ಲಕ್ಕಿಂತಲೂ ಶ್ರೇಷ್ಠವಾದ ಮಾನವದೇಹರೂಪೀ ಯಂತ್ರವು ರಚನೆಯಾಗಿದೆ. ಅದರಲ್ಲಿ ಇಹಪರ ಸುಖಗಳನ್ನು ಸಾಧಿಸಿಕೊಂಡು ಜಗತ್ತಿನ ಕಲ್ಯಾಣಕ್ಕಾಗಿ ಶ್ರಮಿಸಬಲ್ಲ ಶಕ್ತಿಯುಳ್ಳ ಜ್ಞಾನರೂಪೀ ಧನವು ಇಡಲ್ಪಟ್ಟಿದೆ. ಸೃಷ್ಟಿಯ—ಸೃಷ್ಟಿಕರ್ತನ ಯಥಾರ್ಥಜ್ಞಾನವು ಆದಿ ಮಾನವನಿಗೆ ಪರಮಾತ್ಮನಿಂದಲೇ ಕೊಡಲ್ಪಟ್ಟಿತು. ಅದನ್ನೇ ವೇದವೆಂದು ಹೇಳುತ್ತಾರೆ. ಆ ವೇದ ವನ್ನು ಅನುಸರಿಸಿ ಸಿದ್ಧವಾಗಿರುವುದು ವೈದಿಕ ಸಂಸ್ಕೃತಿ. ವೈದಿಕ ಸಂಸ್ಕೃತಿಯಲ್ಲಿ ಎರಡು ಮಾರ್ಗಗಳಿವೆ. ಒಂದು ಪ್ರವೃತ್ತಿ. ಮತ್ತೊಂದು ನಿವೃತ್ತಿ. ಈ ಎರಡು ಮಾರ್ಗಗಳೂ ಜೀವನ ಉದ್ಧಾರಕ್ಕಾಗಿಯೇ ಸಿದ್ಧವಾಗಿರುವುವು. ಸಂಸಾರದಲ್ಲಿದ್ದು ಕೊಂಡು ಕರ್ತವ್ಯದೃಷ್ಟಿಯಿಂದ ಧರ್ಮವಾಗಿ ಶಾಸ್ತ್ರಮರ್ಯಾದೆಯನ್ನನುಸರಿಸಿ ಬಾಲ್ಯದಲ್ಲಿ ಬ್ರಹ್ಮಚರ್ಯವನ್ನೂ ಯೌವನದಲ್ಲಿ ಗೃಹಸ್ಥಧರ್ಮವನ್ನೂ ವೃದ್ಧಾಪ್ಯದಲ್ಲಿ ವಾನಪ್ರಸ್ಥವನ್ನೂ ಕೊನೆಗೆ ಅಂತ್ಯದಲ್ಲಿ–ಮರಣ ಕಾಲದಲ್ಲಿ ಯೋಗಯುಕ್ತ ಸಂನ್ಯಾಸವನ್ನೂ ಪಾಲನೆಮಾಡಿ, ಇಹ

ಪರ ಶ್ರೇಯಸ್ಸನ್ನು ಪಡೆಯುವುದು ಪ್ರವೃತ್ತಿಮಾರ್ಗ. ಜನ್ಮ ದಿಂದಲೇ ಜಗತ್ತಿನ ಆಕಾಂಕ್ಷೆಯನ್ನು ಗುರ್ತಿಸಿ ವಿಷಯೇಂದ್ರಿಯ ಸುಖರೂಪ ಭೋಗಯುಕ್ತ ಕರ್ಮವನ್ನು ತ್ಯಾಗಮಾಡಿ, ಸದಾ ಸರ್ವದಾ ಈಶ್ವರಚಿಂತನೆಯಲ್ಲಿ, ಭಕ್ತಿ ಜ್ಞಾನಗಳ ಸಾಧನೆಯಲ್ಲಿ ನಿರತನಾಗಿರುವುದು ನಿವೃತ್ತಿ ಮಾರ್ಗ. ಈ ಎರಡು ಧರ್ಮಗಳನ್ನು ಉಪದೇಶಮಾಡಿ ಆಚರಿಸಿ ತೋರಿಸಿ ಲೋಕೋದ್ಧಾರ ಮಾಡುತ್ತಿರುವ ಗುರುಗಳ, ಆಚಾರ್ಯರುಗಳ ಪರಂಪರೆಯು ಪ್ರಾಚೀನ ಕಾಲದಿಂದಲೂ ಆರ್ಯ ವೈದಿಕ ಧರ್ಮದಲ್ಲಿ ಸಿದ್ಧವಾಗಿರುವುದು. ಮರೀಚ್ಯಾದಿ ಸಪ್ತ ಮಹರ್ಷಿಗಳು ಪ್ರವೃತ್ತಿ ಧರ್ಮವನ್ನು ಅನು ಸರಣೆಮಾಡಿ ಮಕ್ಕಳು ಮೊಮ್ಮಕ್ಕಳು ಮುಂತಾದ ಪ್ರಜೆಗಳ ಪರಂಪರೆ ಯನ್ನು — ಪೀಳಿಗೆಯನ್ನು ಪಾಲಿಸಿಕೊಂಡು ಬರುತ್ತಿರುವರು. ಹಾಗೆಯೇ ಸನಕಾದಿ ಬ್ರಹ್ಮಜ್ಞಾನಿಗಳು ಯೋಗ್ಯರಾದ ಅಧಿಕಾರಿ ಗಳಿಗೆ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಉಪದೇಶಮಾಡಿ ಆಚರಿ ಸುತ್ತಾ ಶಿಷ್ಯ ಪ್ರಶಿಷ್ಯರುಗಳ ಮೂಲಕ ನಿವೃತ್ತಿ ಧರ್ಮ ಪರಂಪರೆ ಯನ್ನು ಪಾಲಿಸಿಕೊಂಡು ಬರುತ್ತಿರುವರು.

ಇದು ವ್ಯಕ್ತಿ ಧರ್ಮವಾಯಿತು. ಸಮಷ್ಟಿ ಧರ್ಮ ಅಂದರೆ ಮಾನವ ಸಮಾಜವನ್ನೇ ಧರ್ಮದ ಚೌಕಟ್ಟಿನಲ್ಲಿ ಆಳವಡಿಸಿ ಅದು ಧರ್ಮದಿಂದ ಕರ್ತವ್ಯಪಾಲನೆ ಮಾಡುವಂತೆ ಮತ್ತು ಶಾಸನ ಶಿಷ್ಟ ಪರಿಪಾಲನಾರೂಪ ಧರ್ಮೋದ್ಧರಣ ಕಾರ್ಯಮಾಡುವುದಕ್ಕೆ ರಾಜ ನಿರಲೇಬೇಕು. ಅವನು ತನ್ನ ಆಳ್ವಿಕೆಯ ಸಾಮರ್ಥ್ಯದಿಂದ ದೇಶ ವನ್ನೆಲ್ಲಾ ತನ್ನ ಶಾಸನಕ್ಕೊಳಪಡಿಸಿಕೊಳ್ಳಬೇಕು. ಹೀಗೆ ಬ್ರಾಹ್ಮಣ ಶಕ್ತಿಯು ಧರ್ಮಾನುಸರಣೆಗೂ ಕ್ಷತ್ರಿಯ ಶಕ್ತಿಯು ಧರ್ಮ ಪರಿ

ಪಾಲನೆಗೂ ಅತ್ಯವಶ್ಯಕ.

ಇದು ಸಾಮಾನ್ಯ ಸ್ಥಿತಿ. ಜಗತ್ತಿನ ಪ್ರಾರಂಭದಲ್ಲಿ ಲೋಕ ಮಹೇಶ್ವರನಾದ ಪರಮಾತ್ಮನು ತನ್ನ ಸಂಕಲ್ಪದಿಂದ ಧರ್ಮನಿಯಂತೃಗಳಾದ ಸಪ್ತಮಹರ್ಷಿರೂಪ1 ಪ್ರವೃತ್ತಿ ಧರ್ಮಾನುಸರಣ ಶಕ್ತಿಗಳನ್ನೂ ಸನಕಸನಂದನಾದಿ2 ನಿವೃತ್ತಿ ಧರ್ಮಾನುಸರಣರೂಪ ಶಕ್ತಿಗಳನ್ನೂ ಚತುರ್ದಶಮನುರೂಪ ಧರ್ಮಪರಿಪಾಲಕ ಶಕ್ತಿಗಳನ್ನೂ ತನ್ನ ಸಂಕಲ್ಪದಿಂದಲೇ ಸೃಷ್ಟಿಮಾಡಿದ್ದಾನೆ. ಈ ಎರಡು ಧರ್ಮಗಳೊಳಗೆ ಯಾವುದಾದರೊಂದರ ಅನುಸರಣೆಯಿಂದಲೇ ಮನುಷ್ಯನು ಮುಕ್ತಿಯನ್ನು ಪಡೆಯಬೇಕು.

"ಯಾವ ಪುರುಷನು ನನ್ನ ಈ ಪರಮೈಶ್ವರ್ಯರೂಪ ವಿಭೂತಿಯನ್ನೂ ಯೋಗಶಕ್ತಿಯನ್ನೂ ತತ್ವದಿಂದ ತಿಳಿಯುತ್ತಾನೆಯೋ ಆತನು ನಿಶ್ಚಲ ಭಕ್ತಿಯೋಗದಿಂದ ಯುಕ್ತನಾಗುತ್ತಾನೆ." ಎಂದು ಏಳನೆಯ ಶ್ಲೋಕದಲ್ಲಿ ಹೇಳುತ್ತಾನೆ.

ಇಲ್ಲಿ ಗುರ್ತುಮಾಡಬೇಕಾದುವು ವಿಭೂತಿ ಮತ್ತು ಯೋಗ. ಹಿಂದಿನ ಮೂರು ಶ್ಲೋಕಗಳಲ್ಲಿ ಭಗವಂತನು ಬುದ್ಧಿ ಮುಂತಾದ ಭಾವಗಳನ್ನೂ ಮಹರ್ಷಿಗಳು ಮುಂತಾದವರುಗಳನ್ನೂ ಸೃಷ್ಟಿಮಾಡಿರುವೆನೆಂದು ಹೇಳಿರುವುದೂ ಏಳನೆಯ ಅಧ್ಯಾಯದಲ್ಲಿ* "ಜಲದಲ್ಲಿರುವ ರಸಶಕ್ತಿಯು ನಾನು" ಎಂದ ಮಾತಾಗಿಯೂ ಹಿಂಭ

1 ಬ್ರಾಹ್ಮಣ! ಮರೀಚ್ಯಾದಿ ಸಪ್ತ ಮಹರ್ಷಿಗಳು 2 ಮನುಗಳು.
* ಅಧ್ಯಾಯ ೭ ಶ್ಲೋಕ ೮.

ತ್ರಿ ನೆಯ ಅಧ್ಯಾಯದಲ್ಲಿ 'ನಾನು ಕ್ರತು ಸ್ವರೂಪನು, ನಾನು ಯಜ್ಞಸ್ವರೂಪನು ಎಂದು ಸ್ಪುಂತಾಗಿ ಹೇಳಿರುವುದೂ ಇವೆಲ್ಲಾ **ಆತನ ವಿಭೂತಿಯ** ವರ್ಣನೆಯು ಹಾಗೆಯೇ ಆತನ ಅಲೌಕಿಕ ಶಕ್ತಿಯನ್ನು ದೇವತೆಗಳೂ ಮಹರ್ಷಿಗಳೂ ತಿಳಿಯಲಾರರೆಂಬುದೂ ತಾನೇ ಸ್ವತಃ ತಾಮಸ, ರಾಜಸ, ಸಾತ್ವಿಕೀರೂಪದ ಸೃಷ್ಟಿಯಲ್ಲಿ ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿ ಒಳಹೊಕ್ಕ ಇದ್ದಾಗ್ಯೂ ಆ ಭಾವಗಳು ನನ್ನಿಂದಲೇ ಉದಗೂ ಅವು ನನ್ನೊಳಗೆಯೂ ಇಲ್ಲ ನಾನು ಅವುಗಳೊಳಗೂ ಇಲ್ಲ

'ಯಾವ ಶಕ್ತಿಯಿಂದ ಸಂಪೂರ್ಣ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳನ್ನು ಮಾಡುತ್ತಾ ಆ ಕಾ ರ ಣ ದಿಂ ದ ಸರ್ವಲೋಕ ಮಹೇಶ್ವರನಾಗಿಯೂ ಸಮಸ್ತ ಭೂತಗಳಿಗೆ ಮಿತ್ರನಾಗಿಯೂ ಸಮಸ್ತ ಯಜ್ಞಗಳಿಗೆ ಭೋಕ್ತೃವಾಗಿಯೂ ಸರ್ವಾಧಾರನಾಗಿಯೂ ಸರ್ವತಕ್ತನಾಗಿಯೂ ಇರುವನೋ ಯಾವ ಶಕ್ತಿಯಿಂದ ಈ ಸಂಪೂರ್ಣ ಜಗತ್ತನ್ನು ತನ್ನ ಒಂದೇ ಅಂಶದಿಂದ ಧಾರಣೆಮಾಡಿರುವನೋ ಹೀಗೆ ಯುಗಯುಗದಲ್ಲಿಯೂ ತನ್ನ ಇಚ್ಛಾನುಸಾರ ಬೇರೆಬೇರೆ ಕಾರ್ಯಗಳಿಗಾಗಿ ಬೇರಬೇರ ರೂಪಗಳನ್ನು ಧರಿಸುತ್ತಾ ಎಲ್ಲ ಕಾರ್ಯಗಳನ್ನು ಮಾಡುತ್ತಿದ್ದರೂ ಒಂದಕ್ಕೂ ಅಂ ಟ ದಂ ತೆ ನಿರ್ಲೇಪನಾಗಿರುವನೋ ಅದು ಆತನ ಅದ್ಭುತ ಯೋಗಶಕ್ತಿಯ ವರ್ಣನೆಯು

---

* ಅಧ್ಯಾಯ 10 ಶ್ಲೋಕ 42

ಹೀಗೆ ಪರಮಾತ್ಮನಿಂದ ಜಗತ್ತು ರಚಿತವಾಗಿದೆ. ಎಲ್ಲವೂ ಆತನ ಅಂಶದಿಂದಲೇ ಧಾರಣೆಮಾಡಲ್ಪಟ್ಟಿದೆ. ಪ್ರಪಂಚದಲ್ಲಿ ಯಾವ ವಸ್ತುವು ಶಕ್ತಿ ಸಂಪನ್ನವಾಗಿ ಕಾಣಬರುವುದೋ ಯಾವುದಾದರೊಂದು ವಿಶೇಷತೆಯು ಕಾಣಬರುತ್ತದೆಯೋ ಅದೆಲ್ಲವನ್ನೂ ಅಥವಾ ಸಮಸ್ತ ಜಗತ್ತನ್ನೂ ಪರಮಾತ್ಮನ ವಿಭೂತಿ ಅಥವಾ ಅವನ ಸ್ವರೂಪ ಎಂದು ತಿಳಿದು ಪರಮಾತ್ಮನನ್ನು ಜಗತ್ತಿನ ಉತ್ಪತ್ತಿ ಸ್ಥಿತಿಸಂಹಾರ ಕಾರಣನೆಂದೂ ಸರ್ವಶಕ್ತನೆಂದೂ ಸರ್ವೇಶ್ವರನೆಂದೂ ಸರ್ವಾಧಾರನೆಂದೂ ಪರಮ ದಯಾಳುವೆಂದೂ ಸಮಸ್ತ ಪ್ರಾಣಿಗಳ ಸುಹೃತ್–ಮಿತ್ರನೆಂದೂ ಸರ್ವಾಂತರ್ಯಾಮಿಯೆಂದೂ ಭಾವಿಸುವುದು ಆತನ ವಿಭೂತಿ ಮತ್ತು ಯೋಗವನ್ನು ತತ್ವದಿಂದ ತಿಳಿಯುವುದು ಎಂದು ಅರ್ಥ.

ದೇವತೆಗಳಿಗೂ ಮಹರ್ಷಿಗಳಿಗೂ ತಿಳಿಯಲು ಸಾಧ್ಯವಿಲ್ಲದ ಪರಮಾತ್ಮನ ವಿಭೂತಿಯನ್ನೂ ಲೋಕಮಹೇಶ್ವರತ್ವವನ್ನೂ ತತ್ವದಿಂದ ತಿಳಿಯಲು ಸಾಮಾನ್ಯ ಮನುಷ್ಯನಿಗೆ ಸಾಧ್ಯವೆ? ಎಂಬ ಶಂಕೆಯು ಇಲ್ಲಿ ಹುಟ್ಟಬಾರದು. ಆತ್ಮತತ್ವವನ್ನು ತಿಳಿಯುವುದು ಕಷ್ಟ ಎಂದು ತಿಳಿಸುವುದಕ್ಕಾಗಿ ಹಿಂದೆ ಪ್ರಸ್ತಾಪಿಸಿದ್ದರೂ ಪರಮಾತ್ಮನ ಅಂತರಂಗ ಭಕ್ತರು, ತತ್ವದಿಂದ ದೇವನ ವಿಭೂತಿಯನ್ನೂ ಯೋಗವನ್ನೂ ಗುರ್ತಿಸಬಲ್ಲರು ಎಂದು ಈ ಶ್ಲೋಕದಲ್ಲಿ ಸಾರಿದೆ

ನಿರ್ವಿಕಲ್ಪಯೋಗವನ್ನು ಪಡೆಯುವುದು ಸಾಮಾನ್ಯರಿಗೆ ಸಾಧ್ಯವಿಲ್ಲ. ಅದಕ್ಕೆ ಪರಮಾತ್ಮನ ಮಹಾಮಹಿಮೆಯನ್ನು, ಅನಂತ ಶಕ್ತಿಯನ್ನು ಪರಿಚಯಮಾಡಿಕೊಂಡಿರಬೇಕು. ನದಿಗಳು ಮೇಲಿನ

ಬೆಟ್ಟದಿಂದ ವೇಗವಾಗಿ ಹರಿಯುತ್ತ ಧಢಧಢನೆ ಸಮುದ್ರವನ್ನು ಪ್ರವೇಶಮಾಡಿದರೂ ಅಲ್ಲಿ ತಮ್ಮ ಚಾಂಚಲ್ಯವನ್ನು ನೀಗಿಕೊಂಡು ಅನಂತಸಾಗರನ ವಕ್ಷಃಸ್ಥಲದಲ್ಲಿ ವಿಶ್ರಾಂತಿ ಹೊಂದುತ್ತವೆ. ತಮ್ಮ ನಾಮರೂಪಗಳನ್ನು ಸಮುದ್ರದಲ್ಲಿ ಅಡಗಿಸಿ ಅದನಲ್ಲಿಯೇ ಲೀನ ವಾಗುತ್ತವೆ. ಹಾಗೆಯೇ ವಿವಿಧ ಕರ್ಮಪ್ರವಾಹರೂಪ ಜನ್ಮ—ಮರಣಗಳ ಸುಳಿಯಲ್ಲಿ ಸಿಕ್ಕಿ ಸಂಸಾರರೂಪೀ ನದಿಯಲ್ಲಿ ತೇಲಿ ಹೋಗುತ್ತಾ ಇದ್ದರೂ ಪುಣ್ಯವಿಶೇಷದಿಂದ ಮಹಾತ್ಮರ ಅನುಗ್ರಹವನ್ನು ಪಡೆದು, ಪರಮಾತ್ಮಭಕ್ತಿ ಅಥವಾ ಅಖಂಡ ಜ್ಞಾನ ಸ್ವರೂಪೀ ಸಮುದ್ರ ರಾಜನ ವಕ್ಷಸ್ಥಲದಲ್ಲಿ ಚಿರವಿಶ್ರಾಂತಿಯನ್ನು —ಮನಸ್ಸಮಾಧಾನವನ್ನು ಪಡೆಯಬಲ್ಲವರು ಮಾತ್ರ ಅವಿಕಂಪ ಯೋಗಕ್ಕೆ ಅವ್ಯಭಿಚಾರಿಣೀ ಭಕ್ತಿಗೆ ಅಧಿಕಾರಿಗಳಾಗುತ್ತಾರೆ.

ಜಗತ್ತೆಲ್ಲವೂ ಈಶ್ವರನೇ ಎಂದು ತಿಳಿಯುವುದು **ಅವಿಕಂಪ ಯೋಗ. ವಿಕಂಪ** ಎಂದರೆ ಚಂಚಲ. **ಯೋಗ** ಎಂದರೆ ಈಶ್ವರ ನಲ್ಲಿ ಸೇರುವಿಕೆ. ಯಾವ ಯೋಗದಿಂದ ನಾವು ಚಾಂಚಲ್ಯರಹಿತ ರಾಗಿ ಈಶ್ವರನಲ್ಲಿ ಸೇರುವೆವೋ ಅದು **ಅವಿಕಂಪಯೋಗ.**

ಈಶ್ವರನ ಮಾನಸಭಾವದಿಂದ ಸಪ್ತರ್ಷಿಗಳೂ ಮನುಗಳೂ ಉತ್ಪನ್ನರಾದರು ಎಂದೂ ಈ ಜಗತ್ತೆಲ್ಲಾ ಅವರ ಸಂತಾನವೇ ಎಂದೂ ಹಿಂದೆಯೇ ಹೇಳಿದೆ. ಬುದ್ಧಿ, ಜ್ಞಾನ, ಅಸಂಮೋಹ ಮುಂತಾದುವುಗಳೂ ಸಹಾ ಈಶ್ವರನಿಂದಲೇ ಪ್ರಾಣಿಗಳಿಗೆ ಅವರವರ ಕರ್ಮಾನುಸಾರ ಒದಗುತ್ತವೆ ಎಂದು ಹೇಳುವುದರಿಂದ, ಈ ಜಗತ್ತಿನಲ್ಲಿನ ಸಮಸ್ತವೂ ಈಶ್ವರನ ಮಾನಸಭಾವದಿಂದಲೇ ಉತ್ಪನ್ನ

ವಾಗಿ ನಂತರ ಕಾರ್ಯರೂಪಕ್ಕೆ ಬರುತ್ತವೆ ಎಂಬುದು ಸ್ವತಃ ಸಿದ್ಧ ಸಿದ್ಧಾಂತ. ಕಾರ್ಯಕ್ಕೆ ಮುಂಚೆ ಕಾರಣವು ಬೇಕು. ಅಥವಾ ಕಾರಣವೇ ಕಾರ್ಯರೂಪವಾಗಿ ಪರಿಣಮಿಸುವುದು ಎಂದು ತಿಳಿಯ ಬೇಕು. ಆದುದರಿಂದ ಈಶ್ವರನಿಗೆ ಸೃಷ್ಟಿಮಾಡುವ ಇಚ್ಛೆಯು ಹುಟ್ಟುತ್ತಲೇ ಆತನ ಮಾನಸ ಭಾವದಿಂದ ಸಪ್ತರ್ಷಿಗಳೂ ಸನಕ ಸನಂದನರೂ ಚತುರ್ದಶಮನುಗಳೂ ಉತ್ಪನ್ನರಾದರು. ಇವರು ಪ್ರವೃತ್ತಿ ನಿವೃತ್ತಿ ಮಾರ್ಗಗಳಿಗೆ ಮೂಲ ಪುರುಷರಾದರು. ಮನು ಗಳು ಸಾಧು ರಕ್ಷಣೆ ದುಷ್ಟ ಶಿಕ್ಷಣರೂಪ ಧರ್ಮೋದ್ಧರಣ ಕಾರ್ಯಕ್ಕೆ ಮೂಲ ಕಾರಣರಾಗಿ ಜಗತ್ತನ್ನು ಆಳುತ್ತಿದ್ದಾರೆ. ಈಶ್ವರನಿಂದ ಜ್ಞಾನವು ಸೃಷ್ಟಿಯಾದಾಗ ಅದರೊಡಗೂಡಿದ ಜ್ಞಾನೀ ಬ್ರಾಹ್ಮಣನ ಉತ್ಪತ್ತಿಯಾಯಿತು. ನಿರ್ಭಯತೆಯು ಈಶ್ವರ ನಿಂದ ಸೃಷ್ಟಿಯಾದಾಗ ನಿರ್ಭಯ ವ್ಯಕ್ತಿಯು- ಕ್ಷತ್ರಿಯನು ಹುಟ್ಟಿದನು. ಈಶ್ವರನಿಂದ ಅಹಿಂಸಾವೃತ್ತಿಯು ಪ್ರಕಟವಾದಾಗ ಅಹಿಂಸಾವ್ಯಕ್ತಿಯು ಅಥವಾ ಪಾಲನಭಾವದಿಂದೊಡಗೂಡಿದ ಪಶು ಪಾಲನೆ ಮುಂತಾದ ವೃತ್ತಿಯನ್ನನುಸರಿಸುವ ವೈಶ್ಯನ ಉದಯ ವಾಯಿತು. ಈಶ್ವರನಿಂದ ಶ್ರಮಸ್ಸು ವೃತ್ತಿಯು ಸೃಷ್ಟಿಯಾದಾಗ ಶ್ರಮ ಅಥವಾ ಕಷ್ಟಕೆಲಸಗಳನ್ನು ಮಾಡಬಲ್ಲ ಶೂದ್ರನ ಉತ್ಪತ್ತಿ ಯಾಯಿತು. ಕ್ರೋಧದಿಂದ ಕ್ರೋಧೀಪುರುಷನು ಮುಂತಾಗಿ ಹೀಗೆ ವಿವಿಧ ಭಾವಗಳನ್ನನುಸರಿಸಿದ ಮನೋವೃತ್ತಿಯನ್ನು ಅವರವರ ಗುಣಕರ್ಮಗಳನ್ನನುಸರಿಸಿ ಹೊಂದಿದ ಪುರುಷರ ಉದಯ ವಾಯಿತು. ಹೀಗೆ ಸಮಸ್ತ ಭೂತ—ಪ್ರಾಣಿಗಳಲ್ಲಿರುವ ವಿವಿಧ —ಅನಂತ ಭಾವಗಳೆಲ್ಲಾ ಈಶ್ವರನಿಂದಲೇ ಕೊಡಲ್ಪಟ್ಟಿವೆ.

ಆದುದರಿಂದ ಇವೆಲ್ಲವೂ ಈಶ್ವರನ ವಿಭೂತಿಗಳೇ. ಇವುಗಳು ಈಶ್ವರನ ಅದ್ಭುತ ಕೌಶಲ್ಯವನ್ನು ಗುರ್ತುಮಾಡಿಕೊಡುವುವು.

ಎಲ್ಲವೂ ಈಶ್ವರನೇ ಎಂದು ತಿಳಿಯುವ ಮಹಾತ್ಮರು ದುರ್ಲಭ (೭-೧೯) ಎಂಬುವನ್ನು ಇವುಗಳು ಸ್ಪಷ್ಟವಾಗಿ ತೋರಿಸಿ ಕೊಡುತ್ತವೆ.

ಎಲ್ಲವೂ ಈಶ್ವರನೇ ಎನ್ನುವುದು- ಹೇಗೆ ?

ಪ್ರಾರಂಭದಲ್ಲಿ ಈಶ್ವರನ ಸಂಕಲ್ಪದಿಂದ ಮಾನಸಭಾವವು ಉತ್ಪನ್ನ ವಾಯಿತು. ನಂತರ ಅವುಗಳನ್ನು ಭಾವನೆಮಾಡುವ ಪ್ರಜೆಗಳು ಹುಟ್ಟಿದರು ಆದುದರಿಂದ ಇವೆಲ್ಲವೂ ಈಶ್ವರನ ವಿಭೂತಿಗಳೇ. ಆತನ ವಿಶ್ವರೂಪಗಳೇ. ಇವೆಲ್ಲವೂ ವಾಸುದೇವನೇ ಎಂಬುದು ಸಿದ್ಧವಾಗುತ್ತದೆ.

ಯಾರು ಇವನ್ನು ತಿಳಿಯುತ್ತಾರೆಯೋ ಆತನ ಯೋಗವು ಸ್ಥಿರವಾಗುತ್ತದೆ. ಮನುಷ್ಯನಿಗೆ ಸುಖ-ದುಃಖ, ಯಶಸ್ಸು-ಅಪಯಶಸ್ಸು, ಭಯ-ಅಭಯ ಮುಂತಾದ ಭಾ ವ ಗ ಳೆ ಲ್ಲಾ ಪರಮಾತ್ಮನವುಗಳೇ ಎಂದೂ ಆಯಾ ಭಾವಗಳಿಂದೊಡಗೂಡಿದ ಸಮಸ್ತಪ್ರಾಣಿಗಳೂ ಪ ರ ಮಾ ತ್ಮ ನ ಮಾನಸಭಾವದಿಂದಲೇ ಹುಟ್ಟಿದ್ದಾರೆ ಎಂದೂ ನಿಶ್ಚಯಜ್ಞಾನವು ಯಾವಾಗ ಉದಯವಾಗುತ್ತದೆಯೋ ಆಗ ಆತನ ಎದುರಿಗೆ ತೋರಿಬರುವ ಭಾವ ಅಥವಾ ಪ್ರಾಣಿಗಳೆಲ್ಲವೂ ಪರಮೇಶ್ವರನೇ—ಪರಮೇಶ್ವರನವುಗಳೇ ಎಂದು ಅರಿವಾಗುತ್ತದೆ. ಆಗ ಅವನಿಗೆ ಪರಮಾತ್ಮನೊಡನೆ ಅಖಂಡ ಯೋಗವು ಸತತವಾಗಿ ನಿಲ್ಲುತ್ತದೆ. ಜಗತ್ತಿನಲ್ಲಿನ ಸಮಸ್ತವೂ ಈಶ್ವರನೇ

ಎಂದು ಅರಿವಾದಾಗ ನಾವು ಆವನಿಂದ ಹೇಗೆ ದೂರವಾಗುವೆವು ?

ಇಂತಹ ಭಕ್ತನು ಅವಿಚಲಿತಯೋಗದಿಂದ ಯುಕ್ತನಾಗುವನು. ಅಥವಾ ಅವನು ಸದಾ ಈಶ್ವರನೊಡನೆಯೇ ಇರುವನು. ಅವನೇನುಮಾಡುವನೋ ಏನು ತಿನ್ನುವನೋ ಎಲ್ಲಿಗೆ ಹೋಗುವನೋ ಅದೆಲ್ಲವೂ ಈಶ್ವರ ಸಂಬಂಧಿಯಾದುದೇ ಆಗುವುದು. ಇದಾಗುವವರೆಗಿನದೆಲ್ಲಾ **ವಿಕಂಪಿತಯೋಗ** ಅಂದರೆ **ಚಂಚಲ.** ( ಶ್ಲೋಕ 7 ) ಹಾಗೆಯೇ ಸಂಪೂರ್ಣ ಜಗತ್ತಿನ ಉತ್ಪತ್ತಿಗೆ ಪರಮಾತ್ಮನು ಕಾರಣನು. ಆತನ ಮನಸ್ಸಿನಲ್ಲಿ " ಇಂತಹದು ಹೀಗೆ ಆಗಬೇಕು." ಎಂಬ ಸಂಕಲ್ಪವು ಹುಟ್ಟುತ್ತಲೇ ಆತನ ಶಕ್ತಿಗಳು ತಟ್ಟನೆ ಆ ಕಾರ್ಯವನ್ನು ಮಾಡಿ ಬಿಡುತ್ತವೆ.

ಪರಮಾತ್ಮನು ಜಗತ್ತಿನ ಉಪಾದಾನಕಾರಣನೂ ಮತ್ತು ನಿಮಿತ್ತಕಾರಣನೂ ಅಹುದು. ಆತನಯೋಗ ಬಲದಿಂದ ಈ ಸೃಷ್ಟಿ ಚಕ್ರವು ನಡೆಯುತ್ತಾ ಇದೆ. ಆತನಶಾಸನ ಶಕ್ತಿಯಿಂದಲೇ ಸೂರ್ಯ ಚಂದ್ರ, ಇಂದ್ರ, ಮೃತ್ಯುರೂಪಶಕ್ತಿಗಳು ತಂತಮ್ಮ ಕೆಲಸಗಳನ್ನು ಸರಿಯಾಗಿ ಮಾಡುತ್ತಿರುತ್ತವೆ. ಸಮಸ್ತ ಪ್ರಾಣಿಗಳೂ ತಂತಮ್ಮ ಕರ್ಮಾನುಸಾರ, ಒಳ್ಳೆಯ, ಕೆಟ್ಟ, ಯೋನಿಗಳಲ್ಲಿ ಜನ್ಮಧಾರಣೆ ಮಾಡಿ ತಂತಮ್ಮ ಕರ್ಮ ಫಲಗಳನ್ನು ಉಪಭೋಗಿಸುತ್ತವೆ ; ಎಂದು ಭಾವ ಸಮನ್ವಿತರಾದ ಭಕ್ತರು ತಿಳಿಯುತ್ತಾರೆ.

ಭಾವಸಮನ್ವಿತರು ಎಂದರೆ ಪರಮಾತ್ಮನಲ್ಲಿ ಅತಿಶಯ ಪ್ರೇಮ ಮಾಡುವವರು. ಅವರಿಗೆ ಆತನಲ್ಲಿ ನಿಶ್ಚಲವಾದ ಶ್ರದ್ಧೆಯು ಇರುವುದು. ಅವರು ದೇವನ ಗುಣಗಳನ್ನೂ, ಪ್ರಭಾವವನ್ನೂ

ಚೆನ್ನಾಗಿ ತಿಳಿಯುತ್ತಾರೆ. ಅವರು ಎಲ್ಲ ಕಡೆಯಲ್ಲಿಯೂ, ಎಲ್ಲದ ರಲ್ಲಿಯೂ, ಪರಮಾತ್ಮನನ್ನು ನೋಡಲು ಆಶಿಸುತ್ತಾರೆಯಾದುದ ರಿಂದ ದೇವನ ವಿಭೂತಿಯನ್ನು ಚೆನ್ನಾಗಿ ತಿಳಿದಿರುವರು. ಆತನ ಆಜ್ಞೆ ಯಿಲ್ಲದೆ ಒಂದು ಹುಲ್ಲುಕಡ್ಡಿಯೂ ಅಲುಗಾಡದು. ಎಂಬ ಪರಮಾರ್ಥ ತತ್ವದ ರಹಸ್ಯವನ್ನು ತಿಳಿದಿರುವರಾದುದರಿಂದ ಅವರೇ ನಿಜವಾದ ಭಕ್ತರು. ಪರಮಾತ್ಮನ ಆನಂದ ಭಾವವನ್ನು-ಪ್ರೇಮರಸವನ್ನು ಪಾನಮಾಡುವವರು. * ( ಶ್ಲೋಕ 8 )

---

* ಕಲಿಯುಗದಲ್ಲಿ ಎಲ್ಲಕ್ಕಿಂತಲೂ ಭಗವನ್ನಾಮ ಕೀರ್ತನೆಯು ಶ್ರೇಷ್ಠವೆಂದು ಹೇಳುತ್ತಾರೆ. ಸಾಮೂಹಿಕ ಭಜನೆಯು ಪಾಮರರನ್ನು ಉದ್ಧರಿಸುವುದು. ಪಂಡಿತರ ಅಹಂಕಾರವನ್ನು ಕಡಿಮೆಮಾಡುವುದು. ನೃತ್ಯ, ಗೀತಾದಿಗಳಿಂದೊಡಗೂಡಿದ ಸಾಮೂಹಿಕ ಭಜನೆಯು ಮನರಂಜ ನೆಯ ಜೊತೆಗೆ ಸಾಮಾನ್ಯ ಜನರಲ್ಲಿ ಒಂದು ವಿಧವಾದ ಭಕ್ತಿ ಭಾವನೆ ಯನ್ನು ಹುಟ್ಟಿಸುವುದು. ಭಕ್ತರು ಒಟ್ಟಾಗಿ ಸೇರಿದಾಗ, ಅಲೌಕಿಕ ಪವಿತ್ರ ವಾತಾವರಣವು ಉತ್ಪನ್ನವಾಗುವುದು. ಗಿಡದಮೇಲಿನ ಹೂವಿನ ಮೊಗ್ಗು ತನ್ನಲ್ಲಿನ ಸುಗಂಧವನ್ನು ಬಚ್ಚಿಟ್ಟುಕೊಳ್ಳುವುದು ಸಾಧ್ಯ ವಾದೀತು ಎದರೆ ಅದೇ ಅರಳಿ ಹೂವಾದಾಗ, ಅದರ ಸುಗಂಧವು ಹೊರ ಹೊಮ್ಮಿ ಸುತ್ತಮುತ್ತಲೆಲ್ಲಾ ಸುಗಂಧಯುಕ್ತವಾದುದನ್ನಾಗಿ ಮಾಡುವು ದಿಲ್ಲವೇ ? ಹಾಗೆಯೇ ಅಂತಃಕರಣದಲ್ಲಿ ಭಗವನ್ನಾಮ ಸಂಕೀರ್ತನೆ ಯಿಂದ ಹುಟ್ಟಿದ ಆನಂದವು ಅಲ್ಲಿಯೇ ನಿಲ್ಲಲು ಸಾಧ್ಯವಿಲ್ಲ. ಭಕ್ತನ ಅಂತಃಕರಣದೊಳಗಿನ ಆನಂದವು ತನಗೆ ತಾನೇ ಪ್ರಕಟವಾಗುವುದು. ಭಗವತ್ಸಾಕ್ಷಾತ್ಕಾರದಿಂದ ಹುಟ್ಟಿದ ಆನಂದವು ಹೃದಯದಲ್ಲಿ ತುಂಬಿ ನಾಮ ಸಂಕೀರ್ತನೆಯಮೂಲಕ, ರೋಮಾಂಚದಮೂಲಕ, ಗದ್ಗದ

ಭಕ್ತರು ಹೇಗೆ ದೇವನನ್ನು ಸೇವೆಮಾಡುವರು ಎಂಬುದರ ವರ್ಣನೆಯು 9 ರಿಂದ 11 ಶ್ಲೋಕಗಳಲ್ಲಿ ವಿವ ರಿ ಸ ಲ್ಪ ಟ್ಟಿ ದೆ. ಮಚ್ಚಿತ್ತಾಃ, ಮದ್ಗತಪ್ರಾಣಾಃ, ಪರಸ್ಪರಂಬೋಧಯಂತಃ, ಮಾಂ ನಿತ್ಯಂ ಕಥಯಂತಃ, ತುಷ್ಯಂತಿ, ರ ಮ ಂ ತಿ, ಎಂದು ಭಕ್ತರ ಜೀವನವು ವರ್ಣಿಸಲ್ಪಟ್ಟಿದೆ.

ನನ್ನಲ್ಲಿಯೇ ನೆಟ್ಟ ಚಿತ್ತವುಳ್ಳವರು. ನನ್ನಲ್ಲಿ ಸೇರಿದ ಪ್ರಾಣ ವುಳ್ಳವರು, ಒಬ್ಬರು ಮತ್ತೊಬ್ಬರಿಗೆ ಭಗವದ್ವಿಷಯಃ ಜ್ಞಾನವನ್ನು ಬೋಧನೆಮಾಡುವವರು, ಭಗವಂತನ ಅಪೂರ್ವ ಕಥೆ ಅವತಾರ ಲೀಲಾ ಚರಿತ್ರೆಗಳನ್ನು ಹೇಳುತ್ತಿರುವವರು, (ವರ್ಣನೆ ಮಾಡುತ್ತಿರು ವವರು) ಪರಮಾತ್ಮನಲ್ಲಿಯೇ ಸಂತೋಷಪಡುವವರು, ಪರ ಮಾತ್ಮನಲ್ಲಿಯೇ ಸದಾ ಸುಖಿಸುವವರು, ಎಂಬ ಭಕ್ತರನ್ನು ಆರು ರೂಪವಾಗಿ ವರ್ಣಿಸಿದ್ದಾರೆ. ಅಥವಾ ಈ ಆರು ಗುಣಗಳೂ ಒಬ್ಬನೇ ಒಬ್ಬ ಭಕ್ತನಲ್ಲಿ ಪ್ರಕಟವಾಗಿರಬಹುದು. ಈ ವಿಷಯವನ್ನು ಅವರವರ ರುಚಿಗೆ ತಕ್ಕಂತೆ ವ್ಯಾಖ್ಯಾನಮಾಡಿರುವುದರಲ್ಲಿ ಗುರ್ತಿಸ ಬಹುದು.

---

ವಾಕ್ಕಿನ ಮೂಲಕ, ಆನಂದಾಶ್ರುಗಳಮೂಲಕ ಹೊರಹೊಮ್ಮುವುದು. ಅಂತಹ ಸನ್ನಿವೇಶವನ್ನು ನೋಡಿ ಅನುಭವಿಸುವುದು, ಅಂತಹ ಭಕ್ತನ ಸಂಗದಿಂದ ಅಂತಃಕರಣವನ್ನು ಪವಿತ್ರಮಾಡಿಕೊಳ್ಳುವುದು ಒಂದು ಭಾಗ್ಯ. ಎಲ್ಲರಿಗೂ ಲಭಿಸುವುದಿಲ್ಲ

ಸಾಮೂಹಿಕ ಭಜನೆಯಿಂದ ಪಾಪವು ನಾಶವಾಗುತ್ತದೆ. ಪಾಪ ಸಂಹಾರಕ್ಕೆ ಕೃಚ್ಛ್ರ ಚಾಂದ್ರಾಯಣಾದಿಗಳು ಹೇಗೆ ಪ್ರಾಯಶ್ಚಿತ್ತವೇ ರೂಪವಾಗಿರುವುದೋ ಹಾಗೆಯೇ ನಾಮಸಂಕೀರ್ತನವೂ ಸಹ.

ಯಾರು ನನ್ನ ನಿಜವಾದ ಭಕ್ತರೋ ಅವರು ದಿನದ ಎಂಟು-ಯಾಮಗಳನ್ನೂ ನನ್ನಲ್ಲಿಯೇ ನಟ್ಟ ಚಿತ್ತದಿಂದ ನನ್ನ ಸ್ವರೂಪವನ್ನು ನೋಡುತ್ತಾ ನನ್ನ ಸ್ವರೂಪವನ್ನು ಹೊಂದುತ್ತಾರೆ. ಅವರು ನಡೆಯುವಾಗ, ಕೆಲಸ ಮಾಡುವಾಗ, ತಾನು ಕೃ ಷ್ಣ ಸ್ವ ರೂ ಪ ನು ಶ್ರೀಕೃಷ್ಣನೂ ತಾನೂ ಭಿನ್ನವಲ್ಲ ಎಂದು ಅವರಿಗೆ ಭಾಸವಾಗುತ್ತದೆ. ಅವರು ತಮ್ಮ ಪ್ರಾಣವನ್ನೂ ಸಹಾ ನನ್ನಲ್ಲಿಯೇ ಅರ್ಪಣೆ ಮಾಡುತ್ತಾರೆ. ತಮ್ಮ ಜೀವನವು ಪರಮಾತ್ಮನ ಅಧೀನವೆಂದೂ ಕೇವಲ ಪರಮಾತ್ಮನ ಭಜನೆ, ಸೇವೆ, ಪೂಜೆಗಳಿಗಾಗಿಯೇ ತಾವು ಹುಟ್ಟಿರುವುದೆಂದೂ ತಿಳಿಯುತ್ತಾರೆ.

ಕ್ಷಣಮಾತ್ರ ನನ್ನ ಸ್ವರೂಪದ ವಿಸ್ಮೃತಿಯಾದರೆ ಅದೊಂದು ದೊಡ್ಡ *ಹಾನಿಯೆಂದೇ ತಿಳಿದು ತಳಮಳ ಗೊಳ್ಳುತ್ತಾರೆ, ಎಂಬುದು ಒಂದು ಬಗೆಯ ವ್ಯಾಖ್ಯಾನ.

ಮತ್ತೊಂದು ಬಗೆಯ ವ್ಯಾಖ್ಯಾನದಲ್ಲಿ "ಮದ್ಗತಪ್ರಾಣಾಃ ಎಂದರೆ ಯಾರು ತಮ್ಮ ಪ್ರಾಣ ಮತ್ತು ಇಂದ್ರಿಯಗಳನ್ನು ನನ್ನಲ್ಲಿಯೇ ಅರ್ಪಣೆಮಾಡಿ ಕಣ್ಣಿನಿಂದ ಸರ್ವತ್ರ ನನ್ನ ಸ್ವರೂಪವನ್ನೇ ಕಾಣುತ್ತಾ ಕಿವಿಯಿಂದ ನನ್ನ ಗುಣಕಥನವನ್ನು ಕೇಳುತ್ತಾ ನಾಲಿಗೆಯಿಂದ ನನ್ನ ಯಶಸ್ಸನ್ನು—ನಾಮವನ್ನು ಉಚ್ಚರಿಸುತ್ತಾ ಇರುವರೋ ಅವರು ಮದ್ಗತಪ್ರಾಣರು" ಎಂದು ಹೇಳಲ್ಪಟ್ಟಿದೆ. "ಯಾರು ತಮ್ಮ ಕಣ್ಣುಗಳನ್ನು ಪರಮಾತ್ಮನ ಕಣ್ಣುಗಳೆಂದೂ, ಕಿವಿಗಳನ್ನು ಪರಮಾತ್ಮನ ಕಿವಿಗಳೆಂದೂ, ನಾಲಿಗೆಯನ್ನು ಪರಮಾತ್ಮನ ನಾಲಿಗೆಯೆಂದೂ ತಿಳಿಯುತ್ತಾನೆಯೋ ಆತನು ಮಚ್ಚಿತ್ತನು. ಮದ್ಗತ

* ಮಹಾಹಾನಿಸ್ತನ್ಮಹಚ್ಛಿದ್ರಂ

ಪ್ರಾಣನು ಎಂದು ಇನ್ನೊಂದು ವಿಧದಲ್ಲಿ ವ್ಯಾಖ್ಯಾನಮಾಡುತ್ತಾರೆ.
ಅಂದರೆ ಪ್ರತಿಯೊಬ್ಬರೂ ತಂತಮ್ಮ ಮನಸ್ಸಿನ ಪರಿಕೆಯ ಮೆಟ್ಟಲಿ
ನಂತೆ ಈ ಶ್ಲೋಕವನ್ನು ಅರ್ಥಮಾಡುತ್ತಾರೆ ಎಂದು ಹೇಳಬಹುದು.

ನಮ್ಮ ಅಭಿಪ್ರಾಯದಲ್ಲಿ, ಕೊನೆಯತರಹದ ಭಕ್ತಿ ಭಾವವು-
ತಮ್ಮ ದೇಹೇಂದ್ರಿಯಗಳನ್ನೇ ಪರಮಾತ್ಮನ ದೇಹೇಂದ್ರಿಯ
ಗಳೆಂದು ತಿಳಿಯುವುದು ಸುಲಭವಲ್ಲ. ಪರಮಾತ್ಮನ ಸಾಕಾರ
ದರ್ಶನವು ಒಮ್ಮೆ ಆದರೂ, ಈ ಭಾವವು ಪರಿಪುಷ್ಟವಾಗಲಾರದು.
ದರ್ಶನ ಎಂದರೆ ನೋಡುವುದು ಎಂದರ್ಥ. ದರ್ಶನ, ದ್ರಷ್ಟಾ.
(ಭಕ್ತ) ದೃಶ್ಯ (ಕಾಣುವ ಭಗವತ್ಸ್ವರೂಪ.) ಈ ಮೂರೂ
ಉಪಾಧಿಯನ್ನನುಸರಿಸಿದ ಒಂದೇ ಜ್ಞಾನದ ಮೂರು ಪ್ರತ್ಯೇಕ ರೂಪ
ಗಳು. ಉಪಾಧಿ ಭೇದದಿಂದ-ನೋಡುವ ಕ್ರಿಯೆಯು ಬೇರೆ. ನೋಡುವ
ಭಕ್ತಿಯು ಬೇರೆ. ನೋಡಲ್ಪಡುವ ಪರಮಾತ್ಮನು ಬೇರೆ, ಎಂಬ
ಮೂರು ಪ್ರತ್ಯೇಕ ಅನುಭವಗಳು (ತ್ರಿಪುಟಿ) ತೋರುತ್ತವೆ. ದರ್ಶನ,
ದ್ರಷ್ಟಾ, ದೃಶ್ಯರೂಪವಾಗಿ ಬೇರೆ ಬೇರೆ ತೋರಿದರೂ, ಒಂದೇ
ಶಕ್ತಿಯೇ ಈ ಮೂರರಲ್ಲಿಯೂ ಒಡೆದು ಮೂಡಿರುವುದು. ನೋಡುವ
ತಾನು, ನೋಡಲ್ಪಡುವ ದೇವನು, ನೋಡುವ ಕ್ರಿಯಾರೂಪ ಈ
ಮೂರೂ ಮರೆತು ಹೋಗಿ ಒಂದೇ ಅಖಂಡ ಪರಮಾತ್ಮಾನು
ಭವವು ಪ್ರಕಟವಾದಾಗ ತಾನೆಂಬುದಾಗಲಿ, ನೋಡುವ
ಕ್ರಿಯೆಯಾಗಲಿ ತೋರದೆ ಪರಮಾತ್ಮರೂಪವಾದ ಒಂದೇ ಶಕ್ತಿಯೇ
ಭಕ್ತನ ಇಂದ್ರಿಯ, ಮನಸ್ಸು. ಬುದ್ಧಿ ದೇಹಗಳಲ್ಲಿ ಪ್ರವಹಿಸಲು
ಆರಂಭಿಸಿದಾಗ ಎಲ್ಲದರಲ್ಲಿಯೂ, ಎಲ್ಲೆಲ್ಲಿಯೂ, ದೇವನೊಬ್ಬನೇ
ಅನುಭವಕ್ಕೆ ಬರುವನು ಅಲ್ಲಿ-ನಾಮ, ರೂಪ, ಗುಣ ಕ್ರಿಯಾದಿ

ಗಳೆಲ್ಲಾ ದೇವನಲ್ಲಿ ಲಯವಾಗಿರುವುವು. ಇದು ಅಖಂಡಭಾವ. ಇದು ವರ್ಣನಾತೀತ. ಅನುಭವೈಕ ವೇದ್ಯ. ಇದೇ ಯಥಾರ್ಥವಾದ ಭಕ್ತಿಯು. ಇಂತಹ ಸ್ಥಿತಿಯನ್ನು ಪಡೆದವರು ಉಚ್ಚಕೋಟಿಯ ಭಕ್ತರು.

ಆದುದರಿಂದ ಪರಮಾತ್ಮನನ್ನೇ ತಮ್ಮ ಪರಮಪ್ರೇಮಿ, ಪರಮ ಸುಹೃತ್, ಪರಮ ಆತ್ಮೀಯ, ಪರಮಗತಿ, ಪರಮಪ್ರಿಯ ಎಂದು ತಿಳಿಯುವ ಅನನ್ಯ ಭಾವಯುಕ್ತ ಭಕ್ತರು **ಮಚ್ಚಿತ್ತರು.**

ಯಾರ ಜೀವನವೂ, ಇಂದ್ರಿಯಗಳ ಸಮಸ್ತ ಚೇಷ್ಟೆಗಳೂ, ಕೇವಲ ಪರಮಾತ್ಮನಿಗಾಗಿಯೇ ಇರುವುವೋ, ಯಾರಿಗೆ ಪರಮಾತ್ಮನ ಕ್ಷಣಮಾತ್ರ ವಿಯೋಗವೂ ಅಸಹ್ಯವೋ, ಯಾರು ದೇವನಿಗಾಗಿಯೇ ಪ್ರಾಣಧಾರಣೆ ಮಾಡಿರುವರೋ, ಯಾರಿಗೆ–ಅನ್ನಾಹಾರಗಳಲ್ಲಿ ಎಚ್ಚರ ನಿದ್ರೆಗಳು ಮುಂತಾದ ಕ್ರಿಯೆಗಳಲ್ಲಿ, ತನ್ನದೆಂಬುದಿಲ್ಲದೆ ಪರಮಾತ್ಮನಿಗಾಗಿಯೇ ಅವು ನಡೆಸಲ್ಪಡುವುವೋ ಅವರು **ಮದ್ಗತ ಪ್ರಾಣರು.**

ಇಂತಹ ಪ್ರೇಮೀ ಭಕ್ತರು ಶ್ರದ್ಧಾ ಭಕ್ತಿಗಳಿಂದೊಡಗೂಡಿ ತಂತಮ್ಮ ಅನುಭವಕ್ಕೆ ತಕ್ಕಂತೆ ಪರಮಾತ್ಮನ ಗುಣ, ಪ್ರಭಾವ, ತತ್ವ–ಲೀಲೆ, ಮಹಾತ್ಮ್ಯೆ, ರಹಸ್ಯಗಳನ್ನು ಪರಸ್ಪರ ಹೇಳಿಕೊಂಡು ಆನಂದಿಸುತ್ತಾರೆ.

ಹಾಗೆಯೇ ಪರಮಾತ್ಮನ ದಿವ್ಯ–ಲೀಲಾ ಚರಿತ್ರೆಗಳನ್ನು ಪರಮ ಪ್ರೇಮದಿಂದ ಆಬಾಲವೃದ್ಧರಿಗೆ ತಿಳಿಯುವಂತೆ ವರ್ಣಿಸುತ್ತಾ ಹರಿಕೀರ್ತನೆ ಮಾಡುತ್ತಾರೆ. ಭಕ್ತಿಯು ಉಕ್ಕಿದಂತೆ ಭಜನೆ

ಮಾಡುತ್ತಾ ಕುಣಿಯುತ್ತಾ ಆನಂದಿಸುತ್ತಾರೆ. ಅವರಿಗೆ ಆಹಾರ ನಿದ್ರೆಗಳ ಜ್ಞಾನವೇ ಇರುವುದಿಲ್ಲ.

ಇಂತಹ ಭಕ್ತರ ಸಂಗಕ್ಕೆ ಸತ್ಸಂಗವೆಂದು ಹೆಸರು. ಇವರು ಭಗವದಾನಂದವನ್ನು ತಾವೂ ಅನುಭವಮಾಡುತ್ತಾ ಇತರರಿಗೂ ಅದನ್ನು ಹಂಚುತ್ತಾರೆ. ಪ್ರೇಮೀಭಕ್ತರ ಅಂತಃಕರಣವು ಭಗವತ್ಪ್ರೇಮದಿಂದ ತುಂಬಿ ತುಳುಕುತ್ತಿರುವುದರಿಂದ ಅವರಿದ್ದ ಸ್ಥಳದಲ್ಲಿಅವರುಹೋದಸ್ಥಳದಲ್ಲಿ ವಿಜಾತೀಯವಾದೊಂದು ತೇಜಸ್ಸು ಅಧಿಕಾರ ಮಾಡುತ್ತಿರುವುದು. ಅವರನ್ನು ದರ್ಶನಮಾಡುತ್ತಿದ್ದಂತೆ, ಅವರ ಸ್ಪರ್ಶನಮಾಡುತ್ತಿದ್ದಂತೆ, ಅಜ್ಞಾನಿ, ಪಾಪಿ, ಪತಿತ, ಹೃದಯಗಳಿಗೆ ಆಪ್ಯಾಯಮಾನವಾದ ಆನಂದವು ತೋರುವುದು. ತಮಗೆ ಅರಿವಿಲ್ಲದಂತೆಯೇ ಅವರ ಭಜನೆ ಕೀರ್ತನೆಗಳಲ್ಲಿ ಸೇರಿ ಇವರೂ ಪರವಶರಾಗುವರು. ಇಂತಹವರ ಸಂಗದಿಂದ ಗಂಗಾದಿ ಪವಿತ್ರ ತೀರ್ಥಗಳೂ ಪವಿತ್ರೀಕೃತವಾಗುವುವು.[1] ಶಾಸ್ತ್ರಗಳು ಸಾರ್ಥಕ ವಾಗುವುವು. ಇಂತಹವರ ಪಿತೃಗಳು ಪಾವನರಾಗುವರು. ( ಶ್ಲೋಕ ೯ )

ಇಂತಹ ಪ್ರೇಮದಿಂದ ಭಜನೆಮಾಡುವ ಸತತ ಭಾವಯುಕ್ತ ಯೋಗಿಗಳಿಗೆ ಬುದ್ಧಿ ಯೋಗವನ್ನು ಕೊಡುತ್ತೇನೆ. ಅದರಿಂದ ಅವರು ನನ್ನನ್ನು ಹೊಂದುತ್ತಾರೆ, ಎಂಬುದು ಹತ್ತನೆಯ ಶ್ಲೋಕದ ಅರ್ಥ.

---

1 ತೀರ್ಥೀಕುರ್ವಂತಿ ತೀರ್ಥಾನಿ ಸುಕರ್ಮೀಕುರ್ವಂತಿ ಕರ್ಮಾಣಿ (ನಾರದ ಭಕ್ತಿಸೂತ್ರ ೬೯.)

ಈ ಪರಮಾತ್ಮ ಸಂಬಂಧವಾದ ತತ್ವ ಜ್ಞಾನವನ್ನು ತಿಳಿದು ಆತನಲ್ಲಿಯೇ ನೆಟ್ಟ ಚಿತ್ತವುಳ್ಳವರಾಗಿ ತಮ್ಮ ಜೀವನವನ್ನು ಆತನಿಗೇ ಸಮರ್ಪಣೆಮಾಡಿ ಕಾಯಾ ವಾಚಾ ಮನಸಾ ಈಶ್ವರಮಯವಾಗಿರುವವರು **ಸತತಯೋಗಿಗಳು** ಅವರು ಯಾವ ಅವಸ್ಥೆಯಲ್ಲಿದ್ದರೂ ಅಲ್ಲಲ್ಲಿಯೇ ಅವರ ಜೀವನವು ಯೋಗಮಯವಾಗಿರುವುದು ಅಂದರೆ ಅವರ ಅಂತಃಕರಣವು ಅಖಂಡವಾಗಿ ಈಶ್ವರನಲ್ಲಿ ಬೆರತುಹೋಗಿರುವುದು. ಈಶ್ವರನಿಗಾಗಿ ಆತ್ಮಸಮರ್ಪಣೆ ಮಾಡುವುದರಲ್ಲಿ ಅವರಿಗೆ ಪ್ರೇಮವಿರುವುದು. ಪ್ರೇಮಭರಿತಚಿತ್ತದಿಂದ ಸದಾ ಈ ಯೋಗವು ಅವರಿಂದ ನಡೆಯುತ್ತಲೇ ಇರುತ್ತದೆ ಆ ರೀತಿ ಅದು ಅವರಿಗೆ ಸಹಜವಾಗಿಬಿಟ್ಟಿರುವುದು ಹೀಗೆ ಈ ಯೋಗಿಯ ಬುದ್ಧಿಯು ಸದಾ ಈಶ್ವರನಲ್ಲಿಯೇ ನಿಂತಿರುವುದು ಅವನ ಬುದ್ಧಿಯಲ್ಲಿ ಮತ್ತಾವುದಕ್ಕೂ ಸ್ಥಳವಿರುವುದಿಲ್ಲ ಆದುದರಿಂದ ಅವನು ಸದಾ ಪರಮೇಶ್ವರನಲ್ಲಿಯೇ ಅವಿಚಲವಾಗಿ ನಿಂತಿರುವುದರಿಂದ ಪರಮಾತ್ಮನನ್ನು ಪೂರ್ಣವಾಗಿಸಾಕ್ಷಾತ್ಕರಿಸಿಕೊಂಡಿರುವನೆಂದೇ ಹೇಳಬಹುದು ಅವನ ಆತ್ಮವೂ ಬುದ್ಧಿಯೂ ಹೀಗೆ ಪರಮಾತ್ಮನ ಸಮೀಪವಲ್ಲಿಯೇ ಇರುವುದರಿಂದ ಅದು ಅಲ್ಲಿಂದ ಹಿಂದಿರುಗುವುದಿಲ್ಲ ಅವು ಹೋಗುವುದಾದರೂ ಎಲ್ಲಿಗೆ ? ಅವು ಎಲ್ಲಗೆ ಹೋದರೆ ಅಲ್ಲಿ ದೇವನೇ ಇರುವನಲ್ಲವೇ ?

ಇದಕ್ಕೆ ಬುದ್ಧಿಯೋಗವೆಂದು ಹೆಸರು ಈ ಬುದ್ಧಿ ಯೋಗವು ಯಾರಿಗೆ ಪ್ರಾಪ್ತವಾಗಿರುವುದೋ ಆತನು ಪರಮಾತ್ಮನ ಜೊತೆಯಲ್ಲಿಯೇ ಇರುವನಲ್ಲವೇ ? ಸಂಜೀವಿನಿ ಹುಳುವು (ಕಣಜ) ಹಸರು ಹುಳವನ್ನು ತಂದು ಗೂಡಿನಲ್ಲಿಟ್ಟು ಸಣ್ಣ ತೂತಿನಿಂದ ಅದನ್ನು

ಮೇಲಿಂದ ಮೇಲೆ ಕುಕ್ಕುತ್ತಿರುವಾಗ ಅದು ಭಯದಿಂದ ಕಣಜದ ಸ್ವರೂಪವನ್ನೇ ಧ್ಯಾನಮಾಡುತ್ತಾ ಕೆಲವುಕಾಲಾನಂತರ ತಾನೂ ಕಣಜದ ರೂಪವನ್ನೆ ಹೊಂದಿ ಗೂಡನ್ನು ಒಡೆದುಕೊಂಡು ಹಾರಿ ಹೋಗುವಂತೆ ತದೇಕಚಿತ್ತನಾದ ಭಕ್ತನೂ ಸಹಾ ಉಪಾಸ್ಯ ದೇವನನ್ನು ಧ್ಯಾನ ಮಾಡುತ್ತಾ ಮಾಡುತ್ತಾ ಭಕ್ತಿಯ ತೇಜಸ್ಸು ಹೆಚ್ಚಿದಂತೆ ತನ್ಮಯನಾಗಿ ಭಗವದ್ರೂಪವನ್ನು ಹೊಂದುತ್ತಾನೆ. ದೇವನು ಈ ಬುದ್ಧಿಯೋಗವನ್ನೀತನಿಗೆ ಕರುಣಿಸುತ್ತಾನೆ ಆದ್ದರಿಂದ ಪರಮಾತ್ಮಪ್ರಾಪ್ತಿಯಾಗುತ್ತದೆ. (ಶ್ಲೋಕ-೧೦)

ದೇವನು ಭಕ್ತಪರಾಧೀನನು. ಸತತವಾಗಿ ತನ್ನನ್ನು ಭಜಿಸುವ ಭಕ್ತರಿಗೆ ಬುದ್ಧಿಯೋಗವನ್ನು ದಯಪಾಲಿಸುತ್ತಾನೆ. ಈ ಬುದ್ಧಿಯೋಗದಿಂದ ಪರಮಾತ್ಮನ ನಿರ್ಗುಣ ನಿರಾಕಾರತತ್ವವೂ ಹಾಗೆಯೇ ಲೀಲಾ ರಹಸ್ಯಮಹತ್ವ ಪ್ರಭಾವರೂಪವಾದಮಹತ್ವಗಳೂ ಸಾಕಾರ ತತ್ವವೂ ಬೋಧವಾಗುವುವು. ನಂತರ ಅವರ ಅಂತಃಕರಣ ದಲ್ಲಿನ ಅಜ್ಞಾನದ ಕತ್ತಲೆಯನ್ನು ಆವರಣಶಕ್ತಿಯಿಂದುಂಟಾದ ತಪ್ಪು ತಿಳುವನ್ನು ಪರಮಾತ್ಮನ ಪ್ರಕಾಶಮಯವಾದ ಜ್ಞಾನ ದೀಪ ದಿಂದ ನಾಶಮಾಡಿಸುತ್ತಾನೆ (ಶ್ಲೋಕ-11)

ಪರಮಾತ್ಮನನ್ನು ಪ್ರೀತಿಪೂರ್ವಕವಾಗಿ ಭಜನೆಮಾಡುವವರಿಗೆ ಬುದ್ಧಿಯೋಗವನ್ನು ಕೊಡುತ್ತೇನೆಂದು ಹೇಳುವಾಗ ಬುದ್ಧಿ ಯೋಗವು ಪ್ರಾಪ್ತವಾಗುವವರೆಗೂ ಪ್ರೇಮಯುಕ್ತ ಭಜನೆಯು ಸಾಧ್ಯವಿಲ್ಲ ಪ್ರೇಮವಿಲ್ಲದೆ ಬುದ್ಧಿಯೋಗವು ಹೇಗೆ ಸಾಧ್ಯ ? ಎಂಬ ಶಂಕೆಯು ಸಹಜವಾಗಿ ಹುಟ್ಟಬಹುದು.

ಭಗವತ್ ಪ್ರೇಮವು ಒಟ್ಟಿಗೆ ಹುಟ್ಟುವುದಿಲ್ಲ ಜನ್ಮಜನ್ಮಾಂತರ

ಗಳಿಂದಲೂ ಬೆನ್ನಟ್ಟಿರುವ ಮಾಯಾಮೋಹವನ್ನು ಹಿಂದೆಹಾಕಿ ಆ ಸ್ಥಳದಲ್ಲಿ ಭಗವತ್‌ಪ್ರೇಮವನ್ನು ಇಡುವುದು ಬಲು ಕಷ್ಟ ಅದಕ್ಕಾಗಿ ಮೆಲ್ಲ ಮೆಲ್ಲಗೆ ಮನಸ್ಸನ್ನು ಸ್ವಾಧೀನ ಮಾಡಿಕೊಂಡು ಪರಮಾತ್ಮನೆಡೆಗೆ ತಿರುಗಿಸುವ ಉಪಾಯುಗಳನ್ನು ದೊಡ್ಡವರು ಗುರ್ತಿಸಿದ್ದಾರೆ ಭಕ್ತಿಯನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ,

ಒಂದುವೈಧೀಭಕ್ತಿ ಮತ್ತೊಂಡು ರಾಗಾನುಗಾ. ಚಂಚಲವಾಗಿ ಸಿಕ್ಕಿಸಿಕ್ಕಿದೆಡೆಗೆ ಓಡುವ ಮನಸ್ಸನ್ನು ಮೆಲ್ಲ ಮೆಲ್ಲನೆ ಸ್ಥಿರವಾಗಿ ಮಾಡುವುದಕ್ಕೆ ಕೆಲವು ವಿಧಿನಿಯಮುಗಳನ್ನು ವಿಧಿಸಿ ಇಂತಹ ರೀತಿ ಯಲ್ಲಿಯೇ ಪೂಜೆಮಾಡಬೇಕು, ಹೀಗೆಯೇ ಧ್ಯಾನ ಮಾಡಬೇಕು, ಎಂದು ಕ್ರಮಗೊಳಿಸಿದ್ದಾರೆ ಅದರಂತೆ ಶ್ರದ್ಧೆಯಿಂದ ಅಭ್ಯಾಸ ಮಾಡುತ್ತಾ ಒಂದರ ಪರಮಾತ್ಮ ಭಕ್ತಿಯು ವೃದ್ಧಿಯಾಗುತ್ತಾ ಕೊನೆಗೆ ಸ್ಥಾಯೀಭಕ್ತಿ ಅಥವಾ ರಾಗಾನುಗಾ ಭಕ್ತಿಯಲ್ಲಿ ಕೊನ ಮುಟ್ಟುತ್ತದೆ ಕತ್ತಲೆಯಲ್ಲಿ ನಡೆಯುವವನಿಗೆ ಕತ್ತಲೆಯು ಹರಿಯುವವರೆಗೆ ಮಾತ್ರ ದೀಪವು ಬೇಕು ಸೂರ್ಯೋದಯವಾದ ಮೇಲೆ ಅದರ ಅವಶ್ಯಕತೆಯು ಇಲ್ಲ ಹಾಗೆಯೇ ಹಲವು ಕಡೆ ಹರಿಯುವ ಮನಸ್ಸಿನ ಪ್ರೇಮವು ಪರಮಾತ್ಮನಲ್ಲಿ ನಿಂತಮೇಲೆ ವಿಧಿನಿಯಮುಗಳ ಅವಶ್ಯಕತೆಯಿರುವುದಿಲ್ಲ ಆದುದರಿಂದ ಪ್ರೇಮವು ಎಷ್ಟು ಪ್ರಮಾಣವಲ್ಲಿ ವೃದ್ಧಿಯಾದರೆ ಅಷ್ಟು ಪ್ರಮಾಣದಲ್ಲಿ ಬುದ್ಧಿ ಯೋಗವು ದೃಢವಾಗುತ್ತದೆ ಮೂರ್ತಿಪೂಜೆ ಮುಂತಾದುವುಗಳಿಂದ ವೃದ್ಧಿಯಾದ ಪ್ರೇಮವು ಮುಂದೆ ಪರಾಭಕ್ತಿಗೆ, ರಾಗಾನುಭಕ್ತಿಗೆ ತಿರುಗುತ್ತದೆ ಅಂದರೆ ಬುದ್ಧಿಯೋಗವು ಪ್ರಾಪ್ತ ವಾಗುವುದಕ್ಕೆ ವೈಧೀಭಕ್ತಿಯು ಬೇಕು ಅದು ವೃದ್ಧಿಯಾಗಿ ರಾಗಾನುಗಾ ಭಕ್ತಿಯ ರೂಪಕ್ಕೆ ಬಲಿತಾಗ ಬುದ್ಧಿಯೋಗವು ಸ್ಥಿರವಾಗುತ್ತದೆ. ಗೌಣೀ

ಅಥವಾ ವೈಧೀಭಕ್ತಿಯವರಿಗೆ ಪರಾಭಕ್ತಿ, ರಾಗಾನುಗಾಭಕ್ತಿಯ ಬುದ್ಧಿಯನ್ನು ಕೊಡುತ್ತದೆ ಅದು ಬಲಿತು ಕೊನೆಗೆ ಸಮಾಧಿ ಲಾಭ ಉಂಟಾಗುತ್ತದೆ

ಇಲ್ಲಿ ಬುದ್ಧಿ ಎಂಬುದನ್ನು ಜ್ಞಾನವೆಂದೇ ಕೆಲವರು ಅಭಿಪ್ರಾಯ ಪಡುತ್ತಾರೆ ಅದೂ ಸರಿಯೇ " ಯಾವ ಭಕ್ತನು ಮೊದಲು ನನ್ನನ್ನು ಪ್ರೇಮಪೂರ್ವಕವಾಗಿ ಭಜಿಸುತ್ತಾನೆಯೋ ಅವನಿಗೆ ಜ್ಞಾನವನ್ನು ದಯಪಾಲಿಸುತ್ತೇನೆ ನಂತರ ನಿಷ್ಕಾಮಕರ್ಮದಿಂದ ಅಂತಃಕರಣಶುದ್ಧಿಯಾಗುತ್ತದೆ ಭಗವತ್ಪ್ರೇಮವು ಹುಟ್ಟಬೇಕಾದರೆ ಕಾಮನೆಯು ನಷ್ಟವಾಗಲೇಬೇಕು ನಿಷ್ಕಾಮಕರ್ಮದಿಂದಅಹಂಕಾರವೂ ನಷ್ಟವಾಗುತ್ತದೆ ಜ್ಞಾನವನ್ನುಪಡೆಯುವ ಭಕ್ತರಿಗೆ ಜ್ಞಾನಾರ್ಜನೆಯ ಮಾರ್ಗದಲ್ಲಿ ಯಾವವಿಘ್ನಗಳು ಬಂದರೂ ಅವುಗಳನ್ನು ನಾಶಮಾಡುವೆನು" ಎಂದು ಪರಮಾತ್ಮನು ಅಭಯಕೊಡುತ್ತಾನೆ

ಸಮಸ್ತ ಕಾಮನೆಗಳನ್ನು ತೊರೆದು ಸಂಸಾರದ ಸುಖ-ದುಃಖಗಳಿಂದ ಬಳಲಿದ, ಅನನ್ಯಭಕ್ತಿಯಿಂದ ದೇವನನ್ನೇ ಭಜಿಸುತ್ತಿರುವ ಭಕ್ತರನ್ನೋಲೆ ಕರುಣೆಯಿಂದ ಅವರ ಅಜ್ಞಾನದ ಕತ್ತಲೆಯನ್ನು ಜ್ಞಾನದೀಪದಿಂದ ನಾಶಮಾಡುತ್ತಾನೆ

"ಆತ್ಮಭಾವಸ್ಥಃ" ಭಕ್ತರ ಭಾವವನ್ನು ಅನುಸರಿಸಿ ಅವರ ಹೃದಯದಲ್ಲಿ ನೆಲಸಿ ಪರಮಾತ್ಮನು ಅಜ್ಞಾನವನ್ನು ಜ್ಞಾನದೀಪದಿಂದ ಕಳೆಯುತ್ತಾನೆ ಎಂಬುದು ನಿಜ ಏಕೆಂದರೆ ಆತನು

ಸಮಸ್ತರಲ್ಲಿಯೂ ಸಮನು † ಅವನಿಗೆ ದ್ವೇಷಿಗಳಾಗಲೀ ಪ್ರೇಮಿಗಳಾಗಲೀ ಇಲ್ಲ ಆದರೆ ಸೂರ್ಯನ ಪ್ರಕಾಶವು ಸರ್ವತ್ರ ಸಮನಾಗಿ ಇದ್ದರೂ ಸೂರ್ಯಕಾಂತ ಶಿಲೆಯ ಸಂಬಂಧದಿಂದ ಹೆಚ್ಚು ತೇಜಸ್ಸನ್ನು ಹೊರಗೆಡವುವಂತೆ, ಸರ್ವಸಮನಾದ ಆತನು ಭಕ್ತರ ಭಾವದಿಂದ ಆಕರ್ಷಿಸಲ್ಪಡುತ್ತಾನೆ ಅವರಭಾವವು ತೀವ್ರವಾದಂತೆ ಪರಮಾತ್ಮನ ಶಕ್ತಿಯೂ ಅವರ ಅಂತಃಕರಣದಲ್ಲಿ ಹೆಚ್ಚು ಹೆಚ್ಚಾಗಿ ಪ್ರಕಟವಾಗುವುದು

ಸರ್ವವ್ಯಾಪಿಯಾದ ಪರಮಾತ್ಮನು ಭಕ್ತರಹೃದಯದಲ್ಲಿ ಮಾತ್ರ ಇರುವನೆಂದೂ ಪಾಪಿಗಳ ಹೃಯದಲ್ಲಿ ಇರಲಾರನೆಂದೂಶಂಕೆಯು ಹುಟ್ಟಬಹುದು ಅವನು ಅಖಂಡ ಕಲ್ಪವೃಕ್ಷದಂತೆ ಕಲ್ಪವೃಕ್ಷವು ಅವರವರಭಾವಕ್ಕೆ ತಕ್ಕಂತೆ ಫಲವನ್ನು ಕೊಡುತ್ತದೆ. ಪಾಪಿಯಾದವನು ಕಲ್ಪವೃಕ್ಷವನ್ನು “ ಎಲೈ ಕಲ್ಪತರುವೇ! ನನಗೆ ತೃಪ್ತಿಯಾಗುವಂತೆ ಸುಖವನ್ನು ಕೊಡು ಸುಂದರಳಾದ ವೇಶ್ಯೆಯನ್ನು ಕೊಡು ಮದ್ಯಪಾನಕ್ಕೆ ಬೇಕಾದ, ಸಂಭೋಗ ಸುಖಕ್ಕೆ ಬೇಕಾದ ಎಲ್ಲಾ ಅನುಕೂಲಗಳನ್ನೂ ಬೇಕಾದಷ್ಟು ಧನವನ್ನೂ ಕೊಡು ನನ್ನ ಸುಖೋಪಭೋಗಕ್ಕೆ ತಕ್ಕಷ್ಟು ಹಣವನ್ನೂ, ಆಭರಣಗಳನ್ನೂ ಕಳ್ಳತನಮಾಡಿ ಮನೆಗೆ ತರುವುದಕ್ಕೆ ತಕ್ಕಸಹಾಯವನ್ನು ಮಾಡು ”ಎಂದು ಮುಂತಾಗಿ ಪ್ರಾರ್ಥನೆ ಮಾಡಬಹುದು ಕಳ್ಳನು ತನ್ನ ಉದ್ಯೋಗಕ್ಕೆ ಹೊರಡುವುದಕ್ಕೆ ಮುಂಚೆ ದೇವರಿಗೆ ಹರಿಕೆಹೊತ್ತು ತನ್ನ ಕಾರ್ಯವು ನಿರ್ವಿಘ್ನವಾಗಿ ನೆರವೇರುವಂತೆ ಪ್ರಾರ್ಥನೆಮಾಡುತ್ತಾನೆ

† ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ ॥

ಬೆಸ್ತರವನು ತನ್ನ ಬಲೆಯು ತುಂಬಾ ಮೀನುಗಳು ದೊರೆಯಬೇಕೆಂದು ಪ್ರಾರ್ಥಿಸುತ್ತಾನೆ. ಆದರೆ ಭಕ್ತನು ತನಗೆ ಪರಮಾತ್ಮನಲ್ಲಿ ಅನನ್ಯ ಭಕ್ತಿಯು ಉಂಟಾಗುವಂತೆಯೂ ದೇವರ ಅನುಗ್ರಹದಿಂದ ಶಾಶ್ವತ ಮೋಕ್ಷಸುಖವು ದೊರೆಯುವಂತೆಯೂ ಪ್ರಾರ್ಥಿಸುತ್ತಾನೆ ಕಲ್ಪ ವೃಕ್ಷದಂತಿರುವ ದೇವನು ಎಲ್ಲರಿಗೂ ಅವರವರ ಕಾಮನೆಗಳನ್ನು ಪೂರ್ಣಮಾಡುವನಾದ್ದರಿಂದ ಭಕ್ತನ ಭಾವಕ್ಕೆ ತಕ್ಕಂತೆ ಅವನ ಅಜ್ಞಾನವನ್ನು ನಾಶಮಾಡಿ ಜ್ಞಾನದೀಪವನ್ನು ಅವನ ಅಂತಃಕರಣ ದಲ್ಲಿ ಬೆಳಗಿಸಿ ಅವನಿಗೆ ಭಕ್ತಿಜ್ಞಾನಗಳು ವೃದ್ಧಿಯಾಗುವಂತೆ ಅನು ಗ್ರಹಿಸುತ್ತಾನೆ

ದೇವನು ಭಕ್ತಪರಾಧೀನನು ತನ್ನನ್ನು ಸತತವಾಗಿ ಭಜಿ ಸುವ ಭಕ್ತರಿಗೆ ಬುದ್ಧಿಯೋಗವನ್ನು ದಯಪಾಲಿಸುತ್ತಾನೆ ಈ ಬುದ್ಧಿಯೋಗದಿಂದ ಪರಮಾತ್ಮನ ನಿರ್ಗುಣ ನಿರಾಕಾರ ತತ್ತ್ವವೂ, ಹಾಗೆಯೇ ಲೀಲಾ, ರಹಸ್ಯ, ಮಹತ್ವ, ಪ್ರಭಾವರೂಪವಾದ ಸಗುಣ ಸಾಕಾರತತ್ತ್ವವೂ ಬೋಧವಾಗುವುವು ನಂತರ ಅವರ ಅಂತಃಕರಣ ದಲ್ಲಿನ ಅಜ್ಞಾನದ ಕತ್ತಲೆಯನ್ನು—ಆವರಣ ಶಕ್ತಿಯಿಂದುಂಟಾದ ತಪ್ಪು ತಿಳಿವನ್ನು ಜ್ಞಾನದೀಪದಿಂದ ನಾಶಮಾಡುತ್ತಾನೆ

(ಶ್ಲೋಕ ೧೧)

[ ಪರಮಾತ್ಮನ ಈ ಮಧುರವಾಣಿಯನ್ನು ಕೇಳುತ್ತಲೇ ಅರ್ಜುನನಿಗೆ ಅತ್ಯಂತ ಸಂತೋಷವಾಯಿತು ಅವನ ಅಂತಃಕರಣದಲ್ಲಿ ವಿಶೇಷಪ್ರೀತಿಯ ಭಕ್ತಿಯು ಉತ್ಪನ್ನವಾಯಿತು ತನ್ನ ಜನ್ಮವು ಸಫಲವಾಯಿತೆಂದು ತಿಳಿದನು ಅವನ ಸಂಶಯವು ನಾಶವಾಯಿತು ಜನ್ಮ ಮರಣ ಸುಖದುಃಖವು ನಾಶವಾದಂತೆ ತೋರಿತು

[ಪರಮಾತ್ಮನು ಏಳನೆಯ ಅಧ್ಯಾಯದ ಮೊದಲನೆಯ ಎರಡ ನೆಯಶ್ಲೋಕಗಳಲ್ಲಿ ತನ್ನ ಸಮಗ್ರರೂಪದ ಜ್ಞಾನವನ್ನು —ವಿಜ್ಞಾನ ಸಹಿತವಾದ ಜ್ಞಾನವನ್ನು ಅರ್ಜುನನಿಗೆ ಉಪದೇಶಮಾಡಲು ಪ್ರಾರಂ ಭಿಸಿ ಏಳನೆಯ ಅಧ್ಯಾಯ ಪೂರ್ತಿಯಾಗಿ ಅದನ್ನು ವರ್ಣಿಸಿದ್ದಾನೆ ಎಂಟನೆಯ ಅಧ್ಯಾಯದಲ್ಲಿ ಅರ್ಜುನನ ಏಳು ಪ್ರಶ್ನೆಗಳಿಗೆ ಉತ್ತರ ಕೊಡುತ್ತಾ ಅದೇ ಉಪದೇಶವನ್ನು ಮುಂದರಿಸಿದ್ದಾನೆ ಆದರೆ ಅದರ ಶೈಲಿಯು ಬೇರೆಯಾಗಿತ್ತು ಆದುದರಿಂದ ಒಂಭತ್ತನೆಯ ಅಧ್ಯಾಯದಲ್ಲಿ ಅದೇ ವಿಜ್ಞಾನಸಹಿತ ಜ್ಞಾನವನ್ನು ವರ್ಣನೆ ಮಾಡು ವೆನೆಂದು ಹೇಳುತ್ತಾ ಅದನ್ನು ಅಂಗ ಪ್ರತ್ಯಂಗಗಳ ಸಹಿತವಾಗಿ ಚೆನ್ನಾಗಿ ತಿಳಿಸಿಕೊಟ್ಟಿದ್ದಾನೆ ಅನಂತರ ಅದೇ ವಿಷಯವನ್ನು ಬೇರೆ ಶಬ್ದಗಳಲ್ಲಿ ಪುಷ್ಟೀಕರಣಮಾಡುವುದಕ್ಕಾಗಿ ಹತ್ತನೆಯ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಅದೇ ವಿಷಯವನ್ನು ಪುನಃ ಪ್ರಾರಂಭಿಸಿ ಐದು ಶ್ಲೋಕಗಳ ಮೂಲಕ ತನ್ನ ಯೋಗಶಕ್ತಿ ಮತ್ತು ವಿಭೂತಿಗಳನ್ನು ವರ್ಣನೆಮಾಡಿ ಏಳನೆಯ ಶ್ಲೋಕದಲ್ಲಿ ಅವುಗಳನ್ನು ತಿಳಿಯುವುದರಿಂದ ಅವಿಚಲವಾದ ಭಕ್ತಿಯು ಹುಟ್ಟುವುದೆಂದು ತೋರಿಸಿದ್ದಾನೆ ಎಂಟನೆಯ ಮತ್ತು ಒಂಭತ್ತನೆಯ ಶ್ಲೋಕಗಳಲ್ಲಿ ಭಕ್ತಿಯೋಗದಿಂದ ಪರಮಾತ್ಮನ ಭಜನೆಯಲ್ಲಿ ಮಗ್ನರಾಗಿರುವ ಭಕ್ತರ ಭಾವವನ್ನೂ ಆಚರಣೆಯನ್ನು ವರ್ಣನೆ ಮಾಡಿದ್ದಾನೆ ಹತ್ತನೆಯ ಮತ್ತು ಹನ್ನೊಂದನೆಯ ಶ್ಲೋಕಗಳಲ್ಲಿ ಅಂತಹಭಜನೆಯ ಫಲವು ಅಜ್ಞಾನ ಜನಿತ ಅಂಧಕಾರದ ನಾಶಕವೆಂದೂ ಭಗವ ತ್ಪ್ರಾಪ್ತಿಯನ್ನು ಮಾಡಿಸಬಲ್ಲ ಬುದ್ಧಿಯೋಗದ ಪ್ರಾಪ್ತಿಯೆಂದೂ ತೋರಿಸಿ ಆವಿಷಯವನ್ನು ಉಪಸಂಹಾರ ಮಾಡಿದ್ದಾನೆ. ಅನಂತರ ಭಗವಂತನ ವಿಭೂತಿಯನ್ನೂ ಯೋಗವನ್ನೂ ತತ್ವದಿಂದ ತಿಳಿಯು

ವುದು ಭಗವತ್ಪ್ರಾಪ್ತಿಗೆ ಅತ್ಯಂತ ಸಹಾಯವಾಗುವುದೆಂದುಮನಗಂಡು ಅರ್ಜುನನು ಏಳು ಶ್ಲೋಕಗಳಲ್ಲಿ ಮುಂಚೆ ಪರಮಾತ್ಮನನ್ನು ಸ್ತೋತ್ರಮಾಡಿ,ನಂತರ ಆತನ ಯೋಗಶಕ್ತಿಯನ್ನೂ ವಿಭೂತಿಯನ್ನೂ ವಿಸ್ತಾರವಾಗಿ ವರ್ಣನೆ ಮಾಡಬೇಕೆಂದು ಭಗತಂತನನ್ನು ಪ್ರಾರ್ಥನೆ ಮಾಡುತ್ತಾನೆ ]

ಅರ್ಜುನನು ಹೇಳುತ್ತಾನೆ —

" ದೇವ ! ನೀನು ಪರಬ್ರಹ್ಮನು ಪರಂಧಾಮನು ಪರಮಪವಿತ್ರನಾಗಿರುವೆ ಏಕೆಂದರೆ ನಿನ್ನನ್ನು ಸಮಸ್ತ ಋಷಿಗಳೂ ಸನಾತನನೆಂದೂ ದಿವ್ಯಪುರುಷನೆಂದೂ ದೇವತೆಗಳಿಗೆ ಆದಿಯಾದ ದೇವನೆಂದೂ ಜನ್ಮರಹಿತನೆಂದೂ ಸರ್ವವ್ಯಾಪಿಯೆಂದೂ ಹೇಳುತ್ತಾರ ಮಹರ್ಷಿಯಾದ ನಾರದನೂ ಅಸಿತ ದೇವಲ ಋಷಿಗಳೂ ಮಹರ್ಷಿ ವ್ಯಾಸನೂ ಹಾಗೆಯೇ ಹೇಳುತ್ತಾರೆ ನೀನೂ ಸಹಾ ಹಾಗೆಯೇ ಹೇಳುತ್ತಿರುವೆ "

ಪರಬ್ರಹ್ಮನು ಎಲ್ಲಕ್ಕಿಂತಲೂ, ದೊಡ್ಡವನು, ಶ್ರೇಷ್ಠನು, ಭೂತಾಕಾಶ ಚಿತ್ತಾಕಾಶ ಚಿದಾಕಾಶಗಳನ್ನು ಮೀರಿ ಅವುಗಳಿಗಿಂತಲೂ ಉತ್ಕೃಷ್ಟ ಸ್ಥಾನದಲ್ಲಿರುವವನು ಎಲ್ಲಕ್ಕೂ ಪರನಾಗಿರುವವನು ನಿನ್ನನ್ನು ತಿಳಿದರ ಮತ್ತೇನನ್ನೂ ತಿಳಿಯಬೇಕಾಗಿಯೇ ಇಲ್ಲ ಅಂದರೆ ಎಲ್ಲವನ್ನೂ ತಿಳಿದಂತೆಯೇ ಆಗುತ್ತದೆ ಆದುದರಿಂದ ನಿನ್ನನ್ನು ಪರಬ್ರಹ್ಮನೆಂದು ಕರೆಯುತ್ತಾರೆ ನಿನ್ನ ಸ್ಥಾನವನ್ನು ಹೊಂದಿದ ನಂತರ ಪುನಃ ಸಂಸಾರ ಚಕ್ರಕ್ಕೆ ಹಿಂದಿರುಗುವ ಭಯವೇ ಇಲ್ಲ ನಿನ್ನ ಧಾಮಕ್ಕೆ ಪರವಾಗಿ ಇನ್ಯಾವ ಸ್ಥಾನವೂ ಇಲ್ಲ ಆದುದರಿಂದ

ನೀನು ಪರಂಧಾಮನು ನೀನು ಸಕಲ ಪ್ರಾಣಿಗಳಿಗೂ ಆಶ್ರಯ ನಾಗಿದ್ದೀಯೆ ನೀನು ಅನಾದಿ ಅನಂತ ಮತ್ತು ಅನಿರ್ವಚನೀಯ ಶಕ್ತಿಯಿಂದ ಕೂಡಿರತಕ್ಕವನು ಗಂಗಾದಿ ನದಿಗಳು ತಮ್ಮಲ್ಲಿ ಸ್ನಾನಮಾಡಿದವರ ಪಾಪಗಳನ್ನು ಮಾತ್ರ ಪರಿಹರಿಸುತ್ತವೆ. ನೀನು ಸ್ಮರಣೆ ಮಾತ್ರದಿಂದ ಸಮಸ್ತ ಪಾಪಗಳನ್ನೂ ನಾಶಮಾಡುವೆ, ಪವಿತ್ರರನ್ನಾಗಿ ಮಾಡಿ ಮೋಕ್ಷ ಸಾಮ್ರಾಜ್ಯವನ್ನು ಅನುಗ್ರಹಿಸುವೆ; ಆದುದರಿಂದ ನೀನು ಪರಮಪವಿತ್ರ ಪಾವನನಾಗಿದ್ದೀಯೆ. ನಿನ್ನನ್ನು ಎಲ್ಲರೂ ಪುರುಷ-ಶಾಶ್ವತ-ದಿವ್ಯ-ಆದಿದೇವ-ಅಜ-ವಿಭು ಎಂದು ಕರೆ ಯುತ್ತಾರೆ ನವದ್ವಾರಗಳಿಂದೊಡಗೂಡಿದ ದೇಹರೂಪಿಯಾದ ಪುರದಲ್ಲಿ ಮನುಷ್ಯ, ಪಶು, ಪಕ್ಷಿ, ನರ, ದೇವ ಶರೀರಗಳನ್ನು ಉತ್ಪನ್ನಮಾಡಿ ಅವುಗಳಲ್ಲಿ ಅಂತರ್ಯಾಮಿಯಾಗಿ ಶಯನಮಾಡುವುದ ರಿಂದ-ವಿಶ್ರಾಂತಿಯನ್ನು ಹೊಂದುವುದರಿಂದ ನಿನ್ನನ್ನು ಪುರುಷನೆನ್ನು ತ್ತಾರೆ ನೀನು ದೊಡ್ಡದರಲ್ಲಿ ದೊಡ್ಡವನು ಚಿಕ್ಕದರಲ್ಲಿ ಚಿಕ್ಕ ವನು

ನೀನು ಶಾಶ್ವತನು ನಿತ್ಯನು ನಾಶರಹಿತನು. ನೀನು ಎಲ್ಲರಿಗೂ ಎಲ್ಲಕ್ಕೂ ಕಾರಣನಾಗಿದ್ದೀಯೆ ಶರೀರವು ನಷ್ಟವಾದರೂ ನೀನು ನಾಶವಾಗುವವನಲ್ಲ ನೀನು ದಿವ್ಯನು ಪರಮಪ್ರಕಾಶ ರೂಪನು ನೀನು ಆದಿದೇವನು ಅಂದರೆ ಬ್ರಹ್ಮಾದಿ ದೇವತೆ ಗಳಿಗೂ ಆದಿಕಾರಣನು ನೀನು ಅಜನು ಜನ್ಮವಿಲ್ಲದವನು. ನಿನ್ನ ಹುಟ್ಟಿಗೆ ಯಾರೂ ಕಾರಣರಲ್ಲ ಆದರೆ ನಿನ್ನಿಂದಲೇ ಈ ಜಗತ್ತು ಹುಟ್ಟಿರುವುದು ನೀನು ವಿಭುವು ಸರ್ವವ್ಯಾಪಿಯು. ಎಲ್ಲದರಲ್ಲಿಯೂ ತುಂಬಿರುವವನು ನೀನಿಲ್ಲದ ಸ್ಥಳವೇ ಇಲ್ಲ ಆದುದರಿಂದ ನಿನ್ನನ್ನು ವಿಭು—ಈಶ್ವರ ಎನ್ನುತ್ತಾರ

ವಸಿಷ್ಠ ಆಂಗೀರಸ ವಿಶ್ವಾಮಿತ್ರ ಮುಂತಾದ ಬ್ರಹ್ಮಋಷಿ ಗಳು, ತುಂಬರ ಭರತ ಮುಂತಾದ ದೇವರ್ಷಿಗಳು, ವ್ಯಾಸಶಿಷ್ಯ ರಾದ ಅಸಿತಮುನಿ, ದೇವಲಮುನಿ ಮುಂತಾದವರು, ವ್ಯಾಸಮಹರ್ಷಿ ಗಳು ಇವರೆಲ್ಲರೂ ನಿನ್ನ ಗುಣಾನುವಾದ ಮಾಡುತ್ತಾ ಸ್ತೋತ್ರ ಮಾಡುತ್ತಾ ನಿನ್ನ ನಿಜಸ್ವರೂಪ ಬೋಧೆ ಮಾಡಿದ್ದಾರ ನಾರದರೂ ಸಹಾ ನನಗೆ ಅದನ್ನೇ ಹೇಳಿರುತ್ತಾರ ಅಸಿತ ದೇವಲರು ನಮ್ಮ ಅರಮನೆಗೆ ಬಂದಿದ್ದಾಗ್ಗೆ ಇದೇ ಮಾತನ್ನೇ ಹೇಳಿದರೂ ಆಗ ನನ್ನ ಮನಸ್ಸಿಗೆ ಅವರ ಬೋಧೆಗಳು ಚೆನ್ನಾಗಿ ನಾಟಿರಲಿಲ್ಲ ಈಗ-ನೀನು ನನ್ನ ಮೇಲೆ ಕೃಪೆಮಾಡಿ ನಿನ್ನ ಮುಖಾರವಿಂದದಿಂದಲೇ ನಿನ್ನ ಸ್ವರೂಪವನ್ನು ವರ್ಣಿಸುತ್ತಿರುವುದರಿಂದ ನನ್ನ ಅಜ್ಞಾನವು ನಷ್ಟ ವಾಗಿ ಜ್ಞಾನಬೋಧೆಯ ಬೆಲೆಯು ಮನಸ್ಸಿಗೆ ಅರಿವಾಗುತ್ತಾ ಇದೆ
( ಶ್ಲೋಕ 13 )

ಹೇ ದೇವ ! ಕೇಶವ ! ನೀನು ಹೇಳುತ್ತಿರುವುದೆಲ್ಲವೂ ಸತ್ಯ ವೆಂದೇ ನಾನು ಭಾವಿಸುತ್ತೇನೆ ಹೇ ! ಭಗವನ್ ! ನಿನ್ನ ಲೀಲಾಮಯ ಸ್ವರೂಪವನ್ನು ದೇವತೆಗಳಾಗಲೀ, ದಾನವರಾಗಲೀ ತಿಳಿಯಲಾರರು ( ಶ್ಲೋಕ 14 )

ಅತ್ಯಲ್ಪ ಸಮಯದಲ್ಲಿ, ನನ್ನೊಡನೆ ರಥದಲ್ಲಿ ಕುಳಿತುಕೊಂಡು ದೀನನಾದ ನನ್ನ ಮೇಲೆ ಕೃಪೆಮಾಡಿ ಉಪದೇಶ ಮಾಡುತ್ತಾ ನಿನ್ನ ವಚನರೂಪ ಸೂರ್ಯ ಪ್ರಕಾಶದಿಂದ ನನ್ನ ಅಜ್ಞಾನಾಂಧಕಾರವನ್ನು ದೂರ ಮಾಡಿದ್ದೀಯೆ ಯಾರು ಎಷ್ಟು ಉಪದೇಶ ಮಾಡಿದರೂ ಅದು ಹೃದಯಕ್ಕೆ ನಾಟಬೇಕಾದರ, ಅಂತಃಕರಣವು ಪಕ್ವಕ್ಕೆ

ಬಂದಿರಬೇಕು ತೋಟಿಗಾರನು ಗಿಡಗಳನ್ನು ನೆಟ್ಟು ಪಾತೀಮಾಡಿ ಗೊಬ್ಬರ ನೀರು ಹಾಕಿ ಪೋಷಣೆಮಾಡುತ್ತಾನೆ ಅದು ಅವನಿಗೆ ಕೂಡಲೇ ಫಲ ಕೊಡುವುದಿಲ್ಲ ಅದರ ಫಲವು ಯಥಾ ಸಮಯದಲ್ಲಿ ಮಾತ್ರ ಕಾಣಬರುವುದು ಕಾಯಿಯಾಗಿದ್ದಾಗ ರುಚಿಯಾಗಲಾರದು ಕಾಯಿಯು ಪಕ್ವವಾದಾಗ ಮಾತ್ರ ಮಾಧುರ್ಯವು ತೋರಿಬರುವುದು, ಬಣ್ಣ ಬದಲಾಗುವುದು ಹಾಗೆಯೇ ನಮ್ಮ ಅಂತಃಕರಣವೂ ಸಹಾ ಭಗವದ್ಭಕ್ತಿಯನ್ನು ಧಾರಣೆಮಾಡಿ ಅದರ ಆನಂದವನ್ನ ಅನು ಭವಿಸಲು ಶಕ್ತವಾದಾಗ ಮಾತ್ರ, ಪರಮಾತ್ಮನಲ್ಲಿ ಪ್ರೇಮವೂ ಅವನ ಮಹಾ ಮಹಿಮೆಗಳ ಅರಿವೂ ಉಂಟಾಗುವುವು ಹಿಂದೆ ನಾರದಾದಿ ಮಹರ್ಷಿಗಳು ನನಗೆ ಮಾಡಿದ ಉಪದೇಶದಿಂದ ಭಗವನ್ಮಹಿಮೆ ಯನ್ನು ಅರಿತು ಅದರ ಆನಂದವನ್ನು ಅನುಭವಿಸುವ ಯೋಗ್ಯತೆ ಬರಲಿಲ್ಲ ಈಗ ಅವರ ನಿಜವಾದ ಸ್ವರೂಪವು ಗೊತ್ತಾಗುತ್ತಿದ

[ಇಲ್ಲಿ ಭಗವರ್ ಅವ್ಯಕ್ತ ವ್ಯಕ್ತಿ ಶಬ್ದಗಳನ್ನು ಉಪಯೋಗಿಸಿ ಇರುವುದೂ ದೇವ-ದಾನವರಿಬ್ಬರೂ ನನ್ನನ್ನು ತಿಳಿಯಲಾರರೆಂದು ಹೇಳಿರುವುದೂ ಹೆಚ್ಚು ವಿವರಣೆಯನ್ನು ನಿರೀಕ್ಷಿಸುತ್ತದೆ - ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರಗಳನ್ನು ಮಾಡುವುದಕ್ಕಾಗಿ-ಧರ್ಮವನ್ನು ಸ್ಥಾಪನೆಮಾಡುವುದಕ್ಕಾಗಿ, ಭಕ್ತರಿಗೆ ದರ್ಶನ ಕೊಟ್ಟು ಅವರನ್ನು ಉದ್ಧಾರಮಾಡುವುದಕ್ಕಾಗಿ, ದೇವತೆಗಳ ರಕ್ಷಣೆಯನ್ನೂ—ರಾಕ್ಷಸರ ಶಿಕ್ಷೆಯನ್ನೂ ಮಾಡುವುದಕ್ಕಾಗಿ—ಇಂತಹ ಅನೇಕ ಕಾರಣಗಳಿ ಗಾಗಿ ಪರಮಾತ್ಮನು ಯಾವ ವಿವಿಧ ಭಿನ್ನ ಭಿನ್ನ ರೂಪಗಳನ್ನು ಧಾರಣೆ ಮಾಡುವನೋ ಅಂತಹ ಅವತಾರೀ ಮೂರ್ತಿಗಳು ಪರಮಾತ್ಮನ ವ್ಯಕ್ತರೂಪಗಳು ಅದನ್ನು ಸೂಚಿಸುವುದಕ್ಕಾಗಿ

ಇಲ್ಲಿ ವ್ಯಕ್ತಿ ಎಂಬ ಶಬ್ದವು ಬಂದಿದೆ ದಾನವರ ಕುಲದಲ್ಲಿ ದುಷ್ಟರೇ ಅಲ್ಲದೆ ಪ್ರಹ್ಲಾದ, ಬಲಿ, ವಿರೋಚನ ಮುಂತಾದ ಅನೇಕ ವಿದ್ಯಾವಂತ ಜ್ಞಾನಿಗಳೂ ಭಕ್ತರೂ ಆಗಿಹೋಗಿದ್ದಾರೆ ದೇವ ದಾನವರಲ್ಲಿ ಶ್ರೇಷ್ಠ ವ್ಯಕ್ತಿಗಳಿಗೆ ನಿನ್ನ ಸ್ವರೂಪವು ತಿಳಿಯದಿರುವಾಗ ಸಾಮಾನ್ಯ ಮನುಷ್ಯರ ಪಾಡೇನು ? ಎಂದು ಹೇಳುವುದೇ ಇಲ್ಲಿನ ಉದ್ದೇಶ್ಯ ]

ಹೇ ಭೂತಭಾವನ ! *ಭೂತೇಶ ! ದೇವದೇವ ! ಜಗತ್ಪತೆ ಪುರುಷೋತ್ತಮ ! ನಿನ್ನ ಮ ಹಿ ಮೆ ಯ ನ್ನು ತಿಳಿಯ ಬಲ್ಲವನು ನೀನೊಬ್ಬನೇ ಸರಿ ಅನ್ಯರಾರೂ ತಿಳಿಯಲಾರರು ನೀನು ಅನಂತ ಮಹಿಮನು ನಿನ್ನ ಅಸಾಧಾರಣ ಶಕ್ತಿಗಳು, ವಿಭೂತಿಗಳು, ಐಶ್ವರ್ಯ, ಸೋಪಾಧಿಕ-ನಿರುಪಾಧಿಕ ಸ್ವರೂಪ, ಇ ವು ಗ ಳನ್ನು ತಿಳಿಯುವ ಸಾಮರ್ಥ್ಯವು ನಿನ್ನೊಬ್ಬನಿಗೆ ಮಾತ್ರ ಇದೆ ಅನ್ಯರಿಗಿಲ್ಲ ಆಕಾಶದ ವಿಸ್ತಾರವು ಆಕಾಶಕ್ಕೆ ಮಾತ್ರ ಗೊತ್ತು ನೀನು ಸಮಸ್ತ ಜಗತ್ತಿನ ಆದಿ ಕಾರಣನು ನಿನ್ನ ಗುಣ, ಪ್ರಭಾವ, ಲೀಲಾ— ಮಾ ಹಾ ತ್ಮ್ಯೆ , ರೂಪ, ಮುಂತಾದುವು ಅಪರಿಮಿತವಾಗಿವೆ ಆದುದರಿಂದ ಅವುಗಳನ್ನು ಬುದ್ಧಿಯಿಂದ, ಶಾಸ್ತ್ರಗಳಿಂದ ಸಂಪೂರ್ಣವಾಗಿ ತಿಳಿಯಲಾರಿಗೂ ಶಕ್ತಿಯಿಲ್ಲ ನೀನು ಸ್ವಯಂ ಜ್ಞಾನಸ್ವರೂಪವಾಗಿರುವೆ. ಜ್ಞಾತೃ, ಜ್ಞಾನ, ಜ್ಞೇಯಗಳ ಎಲ್ಲೆಯನ್ನು ಮೀರಿ ಇರುವೆ. ಆದುದರಿಂದ ನಿನ್ನನ್ನು ತಿಳಿಯಬಲ್ಲವನು ನೀನೊಬ್ಬನೇ

( ಶ್ಲೋಕ 15 )

* ಸಮಸ್ತ ಪ್ರಾಣಿಗಳನ್ನು ಉತ್ಪನ್ನಮಾಡುವವನು ಭೂ ತ ಭಾ ವ ನ ನು ಸಮಸ್ತ ಪ್ರಾಣಿಗಳನ್ನು ನಿಯಮದಿಂದ ಪಾಲನೆಮಾಡಿ ಶಾಸನಮಾಡಬಲ್ಲವನು ಭೂತೇಶನು ದೇವತೆಗಳಿಗೂ ಸಹಾ ಪೂಜನೀಯನಾಗಿರುವವನು ದೇವದೇವನು ಸಮಸ್ತ ಜಗತ್ತನ್ನು-ಪಾಲನೆಮಾಡುವವನು ಜಗತ್ಪಾಲಕನು ಕ್ಷರ ಮತ್ತು ಅಕ್ಷರರಿಗೆ ಉತ್ತಮನು ಪುರುಷೋತ್ತಮನು

ಹೇ ಯೋಗೀಶ್ವರ ! ನಾನು ಸದಾ ನಿನ್ನನ್ನು ನಿರಂತರವಾಗಿ ಧ್ಯಾನಮಾಡುತ್ತಾ ಯಾವ ಯಾವ ಭಾವಗಳಲ್ಲಿ ಚಿಂತನೆಮಾಡಲು ಸಾಧ್ಯ ? ಹೇ ಜನಾರ್ದನ ! ನಿನ್ನ ಯೋಗವನ್ನೂ ವಿಭೂತಿಯನ್ನೂ ವಿಸ್ತಾರವಾಗಿ ಪುನಃ ತಿಳಿಸುವ ಕೃಪೆಮಾಡು. ನಿನ್ನ ಅಮೃತಮಯ ವಚನಗಳನ್ನು ಎಷ್ಟು ಕೇಳಿದರೂ ತೃಪ್ತಿಯೇ ಆಗುವುದಿಲ್ಲ.

(ಶ್ಲೋಕ 16–18)

ಆದುದರಿಂದ ನಿನ್ನ ಮಹಿಮೆಗಳನ್ನು ಯಾವ ಶಕ್ತಿಯಿಂದ ಈ ಸಮಸ್ತ ಜಗತ್ತನ್ನು ವ್ಯಾಪಿಸಿ ನಿಂತಿರುವೆಯೋ ಆ ವಿಭೂತಿಗಳನ್ನು ತಿಳಿಸಬಲ್ಲವನು ನೀನೊಬ್ಬನೇ ಸರಿ. ನಿನ್ನ ಬಾಯಿಯಿಂದ ನಿನ್ನ ಮಹಿಮೆಗಳನ್ನು ತಿಳಿಯಬೇಕೆಂಬ ಆಶೆಯು ವೃದ್ಧಿಯಾಗುತ್ತಿದೆ. ಚಾತಕ ಪಕ್ಷಿಗೆ ಸ್ವಾತಿ ಮಳೆಯ ಒಂದು ಬಿಂದುವಿನಿಂದಲೇ ತೃಪ್ತಿ ಯಾಗಬಲ್ಲದು. ಹಾಗೆಯೇ ಇತರರ ಸಾವಿರಾರು ಉಪದೇಶಗಳಿ ಗಿಂತಲೂ ನಿನ್ನ ಮುಖಾರವಿಂದದಿಂದ ಹೊರಡುವ ಅಮೃತಮಯ ವಾಕ್ಯಗಳು ಮಾತ್ರ ತೃಪ್ತಿಯನ್ನು ಕೊಡಬಲ್ಲವು.

ಸರ್ವಾಂತರ್ಯಾಮಿಯಾದ-ಸರ್ವಶಕ್ತನಾದ ಸರ್ವರ ಉತ್ಪತ್ತಿಗೂ ಕಾರಣನಾದ ನಿನ್ನ ವಿಭೂತಿಗಳನ್ನು—ಎಲ್ಲೆಲ್ಲಿಯೂ ನೀನು ವ್ಯಾಪಕ ನಾಗಿದ್ದರೂ, ಎಲ್ಲೆಲ್ಲಿ ನಿನ್ನ ವಿಶೇಷ ಶಕ್ತಿಗಳು ಪ್ರಕಟವಾಗುವುವೋ ಅವುಗಳನ್ನು ನನಗೆ ವಿಸ್ತಾರವಾಗಿ ತಿಳಿಸಿ ಶಿಷ್ಯನಾದ† ನನ್ನನ್ನು ಶಿಕ್ಷಿಸಿ ರಕ್ಷಿಸು.

ದೇವ ! ನಿನ್ನ ವಿಭೂತಿಗಳು ಅಗಣಿತವಾದುವು. ಆಕಾಶ

† ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ॥

ದಲ್ಲಿನ ನಕ್ಷತ್ರಗಳನ್ನು ಎಣಿಸಬಹುದು. ಸಮುದ್ರದಲ್ಲಿನ ನೀರನ್ನು ತೊಟ್ಟು ತೊಟ್ಟಾಗಿ ಎಣಿಸಬಹುದು. ನಿನ್ನ ಅಗಣಿತ ಮಹಿಮೆ ಗಳನ್ನು-ವಿಭೂತಿಗಳನ್ನು ಎಣಿಸಲು ಸಾಧ್ಯವಿಲ್ಲ. ನಿನ್ನ ಮಾಯಾ ಮೋಹಕ್ಕೆ ಮರುಳಾಗಿ ನಿನ್ನ ಸ್ವರೂಪವನ್ನು ತಿಳಿದಿರುವೆವೆಂದು ಅಹಂಕಾರಪಡುತ್ತಿರುವವರು ನಿನ್ನ ಅಪಾರ ಸೃಷ್ಟಿಯ ವಿವಿಧ ಶಕ್ತಿ ಗಳ ಜಾಲದಲ್ಲಿ ಸಿಕ್ಕಿ ಚಿತ್ತ ಚಾಂಚಲ್ಯದಿಂದ ಮೋಸಹೋಗುವರು. ಆದುದರಿಂದ ಯಾವ ಯಾವ ಭಾವದಿಂದ ನಿನ್ನ ವಿಭೂತಿಗಳ-ವಿಶೇಷ ಶಕ್ತಿಗಳ ಚಿಂತನೆಯು ನನ್ನಿಂದ ಸಾಧ್ಯ ಎಂಬುದನ್ನು ದಯವಿಟ್ಟು ತಿಳಿಸು.

ಹೇ ಜನಾರ್ದನ! ಸರ್ವಭೂತೇಶನಾದ ನಿನ್ನ ಯೋಗಶಕ್ತಿ ಯಿಂದ—ಭಿನ್ನ ಭಿನ್ನ ಸೃಷ್ಟಿರಚನಾ ಕೌಶಲ್ಯ ಯುಕ್ತ ಯೋಗ ಮಾಯಾಶಕ್ತಿ ಯೊಡಗೂಡಿ ಸ್ಥೂಲ-ಸೂಕ್ಷ್ಮ ಜಡ ಚೇತನಗಳೊಳಗೆ ತುಂಬಿ ನಿಂತಿರುವೆ. ಅವುಗಳನ್ನು ವಿಸ್ತಾರವಾಗಿ ಸ್ಪಷ್ಟವಾಗಿ ನನಗೆ ತಿಳಿಯುವಂತೆ ಹೇಳು. ಯಾವುದನ್ನು ಮಾಡಿದರೆ ಅತ್ಯಂತಸುಲಭ ವಾಗಿ-ಸ್ವಲ್ಪ ಸಾಧನೆಯಿಂದ ನಿನ್ನ ಅನುಗ್ರಹವನ್ನು ಪಡೆಯ ಬಹುದೋ ಅದನ್ನು ವಿಸ್ತಾರವಾಗಿ ತಿಳಿಸು. ನಿನ್ನ ಅಮೃತಮಯ ವಾಣಿಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯೇ ಇಲ್ಲ.

(16-18)

ದೇವನು ಹೇಳುತ್ತಾನೆ—

"ಎಲೈ ಕುರು ಶ್ರೇಷ್ಠನೆ! ನಿನ್ನ ಮಾತುಗಳನ್ನು ಕೇಳಿ ನನಗೆ ಬಹಳ ಆನಂದವಾಯಿತು. ನನ್ನ ದಿವ್ಯ ವಿಭೂತಿಗಳನ್ನು-ನಿನಗೆ ತಿಳಿಸುತ್ತೇನೆ. ನನ್ನ ವಿಸ್ತಾರಕ್ಕೆ ಕೊನೆ ಮೊದಲಿಲ್ಲ. ಅವುಗಳು ಅನಂತಗಳಾಗಿವೆ. ಆದರೂ ಮುಖ್ಯ-ಮುಖ್ಯವಾದವುಗಳನ್ನು

ಹೇಳುತ್ತೇನೆ.

ಗುಡಾಕೇಶ ! ಭೂತಿ ಎಂದರೆ ಇರುವಿಕೆ. ವಿಭೂತಿ ಎಂದರೆ ವಿಶೇಷವಾದ ಇರುವಿಕೆ ಅಥವಾ ಪ್ರಕಟವಾಗುವುದು ಎಂದು ಹಿಂದೆಯೇ ಗುರ್ತಿಸಿದ್ದೇನೆ.

ಪರಮೇಶ್ವರನು ಜಗತ್ತಿನ ತುಂಬಾ ವ್ಯಾಪಿಸಿದ್ದಾನೆ. ಆತನು ಇಲ್ಲದ ಸ್ಥಳವಿಲ್ಲವಾದರೂ ಒಮ್ಮೊಮ್ಮೆ ಒಂದೊಂದು ಸ್ಥಾನ ವಿಶೇಷದಲ್ಲಿ—ವಸ್ತುವಿಶೇಷದಲ್ಲಿ ಪ್ರಕಟನಾಗುತ್ತಾನೆ. ಅದು ವಿಭೂತಿ. ಅಗ್ನಿತತ್ತ್ವವು ಎಲ್ಲೆಲ್ಲಿಯೂ ಇರುವುದಾದರೂ ಅದು ಪ್ರಕಟವಾಗುವುದು ಬೆಂಕಿ, ವಿದ್ಯುತ್, ಸೂರ್ಯ, ಇವುಗಳಲ್ಲಿ ಅದರ ಶಕ್ತಿಯು ಹೆಚ್ಚು ಪ್ರಕಟವಾಗುವುದರಿಂದ ಇವುಗಳು ಅದರ ವಿಭೂತಿಗಳು. ಹಾಗೆಯೇ ಪರಮಾತ್ಮನು—ಪರಮೇಶ್ವರನು ಸರ್ವ ವ್ಯಾಪಿಯಾದರೂ ಯಾವ ಯಾವ ಸ್ಥಳಗಳಲ್ಲಿ ಹೆಚ್ಚು ಕಾಣಬರು ತ್ತಾನೆ ಎಂಬ ಪ್ರಶ್ನೆಯು ಅನವಶ್ಯಕವಾದುದೆಂದು ತೋರಬಹುದು.

ಸಾಧಕನು ಪರಮೇಶ್ವರನನ್ನು ಚಿಂತನೆಮಾಡಲು—ಧ್ಯಾನ ಮಾಡಲು ಇಚ್ಛಿಸುತ್ತಾನೆ. ಅದು ಹೇಗೆ ? ಧ್ಯಾನಕ್ಕೆ ಸ್ವರೂಪವು ಯಾವುದು ? ಸರ್ವವ್ಯಾಪಕ, ಅದೃಶ್ಯ, ಅಚಿಂತ್ಯ, ಅಗೋಚರನನ್ನು ಚಿಂತಿಸುವುದು ಹೇಗೆ ? ಚಿಂತನೆಗೆ ಎದುರಿಗೆ ಒಂದು ವಸ್ತುವು ಬೇಕು. ತನ್ನೆದುರಿಗಿರುವ ವಸ್ತುವನ್ನೇ ಧ್ಯಾನಿಸುವುದು ಮನಸ್ಸಿಗೆ ಕಷ್ಟವಾಗಿರುವಾಗ, ಒಳಗಿನ ವಸ್ತುವನ್ನು ಚಿಂತಿಸುವುದು ಹೇಗೆ ! ಪರಮಾತ್ಮನ ಶಕ್ತಿಯು ಯಾವುದರಲ್ಲಿ ಹೆಚ್ಚು ಪ್ರಕಟವಾಗುವುದೋ ಅದನ್ನು ಪರಮೇಶ್ವರನ ಪ್ರತಿಸ್ವರೂಪವೆಂದು ಭಾವಿಸಿ ಧ್ಯಾನಿಸು

ವುದು, ಪೂಜಿಸಿ ಸೇವೆಮಾಡುವುದು ಉತ್ತಮವಲ್ಲವೆ ? ಎಂಬ ಮುಂತಾದ ಆಲೋಚನೆಗಳು ಅರ್ಜುನನ ಮನಸ್ಸಿನಲ್ಲಿ ಹುಟ್ಟಿದುದ ರಿಂದಲೇ ಆತನು ವಿಭೂತಿಯನ್ನು–ವಿಶೇಷಭೂತಿಯನ್ನು ಆತನ ಅದ್ಭುತ ಶಕ್ತಿಯ ಕೌಶಲ್ಯಮಯ ಯೋಗವನ್ನು ಎಲ್ಲಿ ಕಾಣ ಬಹುದೋ ಅದನ್ನು ವಿಸ್ತಾರವಾಗಿ ಹೇಳಬೇಕೆಂದು ಪ್ರಾರ್ಥಿಸು ತ್ತಾನೆ. ಇದರ ಉತ್ತರವು ಸಂಕ್ಷೇಪವಾಗಿ ಈ ಅಧ್ಯಾಯದ ಮೊದ ಲಿನ ಏಳು ಶ್ಲೋಕಗಳಲ್ಲಿ ಹೇಳಲ್ಪಟ್ಟಿದ್ದರೂ ಅದು ಮುಂದಿನ ಶ್ಲೋಕಗಳಲ್ಲಿ ವಿವರಿಸಲ್ಪಡುವುದು.

ಆ ಅಮೃತ ತುಲ್ಯವಾದ ಮಾತುಗಳನ್ನು ಚೆನ್ನಾಗಿ ಮನನ ಮಾಡಬೇಕು:–

ಭಗವಂತನು ಹೇಳುತ್ತಾನೆ:—

ಅರ್ಜುನ ! ಕುರುಶ್ರೇಷ್ಠ ! ನನ್ನ ದಿವ್ಯವಾದ ವಿಭೂತಿ ಗಳನ್ನು–ಅವುಗಳಲ್ಲಿ ಮುಖ್ಯವಾದವುಗಳನ್ನು ಈಗಲೇ ಹೇಳುತ್ತೇನೆ. ನನ್ನ ವಿಸ್ತಾರಕ್ಕೆ ಕೊನೆ ಮೊದಲಿಲ್ಲ. ನನ್ನ ವಿಭೂತಿಗಳು ಅನಂತ ವಾದುವು. ಅವುಗಳನ್ನು ವರ್ಣಿಸಲು ಯಾರಿಗೂ (ಶಾರದೆ— ಶೇಷರುಗಳಿಗೂ) ಸಾಧ್ಯವಿಲ್ಲ. ಆದುದರಿಂದ ಮುಖ್ಯ—ಮುಖ್ಯ ವಾದುವುಗಳನ್ನು ತಿಳಿಯ ಹೇಳುತ್ತೇನೆ. ಇದರ ಆಧಾರದ ಮೇಲೆ ಉಳಿದವುಗಳನ್ನು ಊಹಿಸಿಕೊಳ್ಳಹಬಹುದು. (19)

ಎಲೈ ಅರ್ಜುನ ! ಸರ್ವಭೂತಗಳಲ್ಲಿಯೂ ವಾಸಮಾಡುವ ಪ್ರತ್ಯಗಾತ್ಮನೇ ನಾನು. ಭೂತಗಳ ಆದಿಮಧ್ಯಾಂತನೂ ನಾನೇ. "

ಆಲಸ್ಯ ನಿದ್ರೆಗಳನ್ನು ಜಯಿಸಿರುವ ಗುಡಾಕೇಶನಾದ ನಿನಗೆ ನನ್ನ ಯಥಾರ್ಥಸ್ವರೂಪವನ್ನು ತೋರಿಸಿಕೊಡುತ್ತೇನೆ. ನಾನು "ಸರ್ವಭೂತಾಶಯಸ್ಥಿತಃ" ಎಲ್ಲಾ ಭೂತಗಳಲ್ಲಿಯೂ ವಾಸಮಾಡು ವವನು. ಒಂದು ಹುಲ್ಲುಕಡ್ಡಿಯೂ ಸಹಾ ನನ್ನಿಂದ ಹೊರತಾ ಗಿಲ್ಲ. ನಾನು ಎಲ್ಲಾ ಪ್ರಾಣಿಗಳ ಆತ್ಮನಾಗಿರುತ್ತೇನೆ. ನಾನಿ ಲ್ಲದೆ ಅವು ಕ್ಷಣಮಾತ್ರವೂ ಜೀವಿಸಲಾರವು. ನುಮ್ಮನೆ ಅವು ಗಳೊಳಗೆ ಇರುವೆನೆಂದು ತಿಳಿಯಬೇಡ. ಅವರವರ ಪೂರ್ವ ಕರ್ಮಾನುಸಾರವಾಗಿ ಅವರಿಂದ ಕೆಲಸಮಾಡಿಸುತ್ತಾ ಅವುಗಳಿಗೆ ಸಾಕ್ಷಿಯಾಗಿರುತ್ತೇನೆ. ಘಟದ ಒಳಗೂ ಹೊರಗೂ ತುಂಬಿರುವ ಆಕಾಶದಂತೆ, ಪ್ರಾಣಿಗಳ, ಜಗತ್ತಿನ, ಒಳಗೂ ಹೊರಗೂ ತುಂಬಿರು ವೆನು. ನಾನು ಎಲ್ಲಕ್ಕೂ ಆದಿಯಾಗಿದ್ದೇನೆ. ಪ್ರಾಣಿಗಳ ಜನ್ಮಕ್ಕೆ ಕಾರಣನಾಗಿದ್ದೇನೆ. ಅವುಗಳ ಮಧ್ಯಕ್ಕೆ ಅಂದರೆ ಇರುವಿಕೆಗೆ ಜೀವನಕ್ಕೆ ಕಾರಣನಾಗಿದ್ದೇನೆ. ಹಾಗೆಯೇ ಅಂತ್ಯವೂ- ಲಯವೂ ನನ್ನಿಂದಲೇ. ಅಂದರೆ ನನ್ನಿಂದಲೇ ಮರಣ ಹೊಂದುತ್ತಾರೆ.

ಪ್ರಾಣಿಗಳ ಆದಿಯು ಉತ್ಪತ್ತಿಯು ಇಂದ್ರಿಯಗೋಚರವಲ್ಲ. ಅಂತವೂ ಹಾಗೆಯೇ. ಹುಟ್ಟುವುದಕ್ಕೆ ಮುಂಚೆ ಎಲ್ಲಿಂದ ಬಂದವು, ಸತ್ತಸಂತರ ಎಲ್ಲಿಗೆ ಹೋಗುವುವು ಎಂಬುದನ್ನು ತಿಳಿಯುವುದು ಕಷ್ಟ. ಮಧ್ಯವು ಮಾತ್ರ ಕಾಣಬರುವುದು. ಕಣ್ಣಿಗೆ ಕಾಣುವ ಸೃಷ್ಟಿಯು ರೂಪ. ಇದು ಅಸತ್ಯವಾದುದು. ಪ್ರಾಣಿಗಳೆಲ್ಲಾ ದೃಷ್ಟಿಗೋಚರವಾದ ಸೃಷ್ಟಿಯನ್ನು ನೋಡಬಲ್ಲರು. ಆದರೆ ತನ್ನ ಉತ್ಪತ್ತಿಗೆ ಕಾರಣನಾದ ಪರಮಾತ್ಮನನ್ನು ನೋಡಲರಿಯರು. ಪರಮಾತ್ಮನಾದರೋ ನಿರಾಮಯ, ನಿರವಯವ, ನಿರಾಭಾಸ,

ನಿಷ್ಪ್ರಪಂಚ, ನಿಷ್ಕಳಂಕ, ನಿರುಪಾಧಿಕ, ನಿರುಪಮ, ನಿರವಲಂಬ, ನಿರಪೇಕ್ಷ, ನಿರಂಜನ, ನಿರಂತರ, ನಿರ್ಗುಣ, ನಿಸ್ಸಂಗ, ನಿರ್ಮಲ, ನಿಶ್ಚಲ, ನಿಷ್ಕಾಮ, ನಿರ್ಲೋಭ, ನಿಷ್ಪರ್ಮನಾಗಿರುತ್ತಾನೆ. ರೂಪ ದಿಂದ ನಾಮ. ಈ ರೂಪ ನಾಮಗಳೆರಡೂ ತೋರಿಕೆ—ಭ್ರಮೆ ಮಾತ್ರ. ಪರಮಾತ್ಮನು ನಾಮ ರೂಪಗಳಿಂದ ಹೊರಗಾಗಿರುವ ನಾದುದರಿಂದ ಆತನನ್ನು ಬುದ್ಧಿಶಕ್ತಿಯಿಂದ ತಿಳಿಯಲು ಸಾಧ್ಯ ವಿಲ್ಲ. ಅನುಭವದಿಂದ ಮಾತ್ರ ತಿಳಿಯಬೇಕು ಇದರ ಮರ್ಮವು ಗುರುಪರಮಾತ್ಮ ಮುಖೇನ ತಿಳಿಯಲ್ಪಡಬೇಕು. ತಿಳಿಯುವ ಆತ್ಮಜ್ಞಾನದ ಸಾಧನೆಯೂ ಸುಲಭವಲ್ಲ. ಇದನ್ನು ಅಭ್ಯಾಸ ದಿಂದ ಮುಂದುವರೆಸಬೇಕು. ಇದು ಸಾಧು ಸತ್ಪುರುಷರ ಸಹ ವಾಸದಿಂದಲೂ, ಅವರ ಅನುಭವ ವಾಣಿಗಳಿಂದ ಮಾಡಲ್ಪಡುವ ಅಧ್ಯಾತ್ಮ ನಿರೂಪಣೆಯ ಶ್ರವಣದಿಂದಲೂ ಸಿದ್ಧವಾಗುತ್ತದೆ.

ಆದುದರಿಂದಲೇ ಅರ್ಜುನನು ಪ್ರಾರಂಭದಲ್ಲಿ ದೇವದೇವ ನಾದ ಶ್ರೀಕೃಷ್ಣಪರಮಾತ್ಮನನ್ನು ಅಂಜಲಿಬದ್ಧನಾಗಿ "ಶಿಷ್ಯ ಸ್ತೇಹಂ ಶಾಧಿ ಮಾಂ ತ್ವಾಂ ಪ್ರಪನ್ನಂ" ನಾನು ನಿನ್ನ ಶಿಷ್ಯ. ನಿನಗೆ ಶರಣು ಬಂದಿರುವ ನನ್ನನ್ನು ಶಿಕ್ಷಿಸಿ, ಉಪದೇಶಮಾಡು—ಎಂದು ಪ್ರಾರ್ಥಿಸುತ್ತಾನೆ.

ತಿರುಕನಲ್ಲಿ ತಿರುಪೆಬೇಡುವುದೂ, ದೀಕ್ಷಾಹೀನನಲ್ಲಿ ದೀಕ್ಷೆ ಯನ್ನು ಬೇಡುವುದೂ, ಅಜ್ಞಾನಿಯಲ್ಲಿ ಜ್ಞಾನವನ್ನು ಬೇಡುವುದೂ ರೋಗಿಯಲ್ಲಿ ಔಷಧಿಯನ್ನು ಬೇಡುವುದೂ, ನಿರ್ಬಲನಲ್ಲಿ ಬಲ ವನ್ನು ಯಾಚಿಸುವುದೂ, ಅವಿವೇಕ. ದೇಹಾಭಿಮಾನಿಯಾದವನಲ್ಲಿ ವಿದೇಹದ ವಿಚಾರವನ್ನು ಕೇಳಿದರೆ ಪ್ರಯೋಜನವೇನು ? ಜ್ಞಾನಿ

ಯಾವ ಗುರುವು, ಜಗದ್ಗುರುವಾದ ಪರಮೇಶ್ವರನು, ಇವರಿಬ್ಬರಿಗೇ ಉಪದೇಶಮಾಡಲು ಅಧಿಕಾರವಿದೆ.

ಪರಮಾತ್ಮನು ತನ್ನ ಉಪಾಸನ ಮತ್ತು ಧ್ಯಾನಗಳನ್ನು ಮಾಡುವ ಸಾಧಕರ ಉಪಯೋಗಕ್ಕಾಗಿ ಉಪಾಸನೆಗೆ ಪ್ರಧಾನಗಳಾದ ವಿಭೂತಿಗಳನ್ನು ಒಂದೊಂದಾಗಿ ಹೇಳುತ್ತಿದ್ದಾನೆ:-

"ಆದಿತ್ಯರಲ್ಲಿ=ಅದಿತಿಯ ಹನ್ನೆರಡು ಜನ ಮಕ್ಕಳಲ್ಲಿ ವಿಷ್ಣುವಾಗಿದ್ದೇನೆ. ಜ್ಯೋತಿಃಪ್ರಕಾಶಮಾನ ಕಿರಣವುಳ್ಳವುಗಳಲ್ಲಿ ಸೂರ್ಯನೂ, 49 ವಾಯು ದೇವತೆಗಳಲ್ಲಿ ಮರೀಚಿಯೂ ನಕ್ಷತ್ರಗಳಲ್ಲಿ ಚಂದ್ರನೂ ಆಗಿದ್ದೇನೆ"

ದ್ವಾದಶಾದಿತ್ಯರಲ್ಲಿ ವಿಷ್ಣು ಎಂಬ ಆದಿತ್ಯನು ನಾನೇ ಅಥವಾ ಅದಿತಿಯ ಮಕ್ಕಳಲ್ಲಿ ವಾಮನಾವತಾರಮಾಡಿದ ಮಹಾ ವಿಷ್ಣುವಿನ ಅವತಾರವಾದ ವಾಮನನು ನಾನೇ ಎಂದು ಅರ್ಥ ಮಾಡಬಹುದು. ಪ್ರಕಾಶವನ್ನುಂಟುಮಾಡುವವರಲ್ಲಿ ಪ್ರತ್ಯಕ್ಷ ದೇವತೆಯಾದ ಸೂರ್ಯನೂ ನಾನೇ.

ಆದಿತ್ಯನ ಉಪಾಸನೆ ಮತ್ತು ಧ್ಯಾನಮಾಡಲು ಅಪೇಕ್ಷಿಸುವವರು ವಿಷ್ಣುನಾಮಕ ಆದಿತ್ಯನನ್ನು ಉಪಾಸನೆಮಾಡಬೇಕು ಆದಿತ್ಯ ಉಪಾಸನೆಯಿಂದ ಶರೀರವು ನೀರೋಗವಾಗುತ್ತದೆ. ಬುದ್ಧಿಯು ತೀಕ್ಷ್ಣವಾಗುತ್ತದೆ. ಪ್ರಕಾಶವನ್ನುಂಟುಮಾಡುವವರಲ್ಲಿ "ಅಂಶುಮಾನ್ ರವಿ" ಯು ನಾನು. ಅಗ್ನಿ, ವಿದ್ಯುತ್, ಚಂದ್ರ, ಸೂರ್ಯ ಮುಂತಾದ ಪದಾರ್ಥಗಳಲ್ಲಿ ಅಂಶುಮಾನ್ ಅಂದರೆ

ಸಂಪೂರ್ಣ ವಿಶ್ವವನ್ನೇ ತನ್ನ ಕಿರಣಗಳಿಂದ ಹರಡಿ ಲೋಕತ್ರಯ ವನ್ನು ತಪಿಸುವ ತೇಜಸ್ವಿಯಾದ ರವಿಯೇ ನಾನು ಯಾರು ಪ್ರಕಾಶಮಯನಾದ ಈ ಸೂರ್ಯದೇವನನ್ನು ಉಪಾಸನೆ ಮಾಡು ತ್ತಾರೆಯೋ *ದ್ವಿಜರ ಧರ್ಮವಾದ ಸಂಧ್ಯಾದಿ ನಿತ್ಯಕರ್ಮಗಳನ್ನು ಮಾಡುತ್ತಾರೆಯೋ ಅವರು ದ್ವಿಜರಲ್ಲಿ ಉತ್ತಮರೆನಿಸಿಕೊಳ್ಳು ವರು. ನಲವತ್ತೊಂಭತ್ತು ವಾಯುದೇವತೆಗಳಲ್ಲಿ ಮರೀಚಿ-ಮರು ದ್ಗಣಗಳ ತೇಜಸ್ಸು ನಾನೆ. ವಾಯುವನ್ನು ಉಪಾಸನೆ ಮಾಡು ವವರು ಮರೀಚಿ ಎಂದು ಉಪಾಸನೆ ಮಾಡಬೇಕು. ನಕ್ಷತ್ರ ಗಳಲ್ಲಿ ಚಂದ್ರನು ನಾನು. ಅಶ್ವಿನಿ ಮುಂತಾದ 27 ನಕ್ಷತ್ರಗಳಲ್ಲಿ ಅಭಿಜಿತ್ ಸೇರಿ 28ನಕ್ಷತ್ರಗಳಲ್ಲಿ ಇವುಗಳ ಅಧಿಪತಿಯಾದ ಚಂದ್ರನು ನನ್ನ ವಿಭೂತಿಯು. ಅಂದರೆ ದ್ವಾದಶಾದಿತ್ಯರು, ಮರುದ್ಗಣ, ನಕ್ಷತ್ರ ಇತ್ಯಾದಿಗಳೆಲ್ಲಾ ನನ್ನ ವಿಭೂತಿಗಳೇ. ನಲವತ್ತೊಂಬತ್ತು ವಾಯುಗಳಿವರು—ಸತ್ವಜ್ಯೋತಿ, ಆದಿತ್ಯ, ಸತ್ಯಜ್ಯೋತಿ, ತಿರ್ಯಗ್ಜ್ಯೋತಿ, ಸಜ್ಯೋತಿ, ಜ್ಯೋತಿಷ್ಮಾನ್, ಹರಿತ, ಋತಜಿತ್, ಸತ್ಯಜಿತ್, ಸುಷೇಣ, ಸೇನಜಿತ್, ಸತ್ಯ ಮಿತ್ರ, ಅಭಿಮಿತ್ರ, ಹರಿಮಿತ್ರ, ಕೃತ, ಸತ್ಯ, ಧ್ರುವ, ಧರ್ತಾ, ವಿಧರ್ತಾ, ವಿಧಾರಯ, ಧ್ವಾಂತ, ಧುನಿ, ಉಗ್ರ, ಭೀಮ, ಅಭಿಯು, ಸಾಕ್ಷಿಪ, ಈದೃಕ್, ಅನ್ಯಾದೃಕ್, ಯಾದೃಕ್, ಪ್ರತಿಕೃತ್, ಋಕ್, ಸಮಿತಿ, ಸಂರಂಭ, ಈದೃಕ್ಷ, ಪುರುಷ, ಅನ್ಯಾದೃಕ್ಷ, ಚೇತಸ, ಸಮಿತಾ, ಸಮಿದೃಕ್ಷ, ಪ್ರತಿದೃಕ್ಷ, ಮರುತಿ, ಸರತ, ದೇವ, ದಿಶ, ಯಜುಃ, ಅನುದೃಕ್, ಸಾಮ, ಮಾನುಷ, ಮತ್ತು ವಿಶ್. ವಾಯು

*ಸರ್ವೇ ಶಾಕ್ತಾ ದ್ವಿಜಾತೀನಾಂ, ನ ಶೈವಾ ನ ಚ ವೈಷ್ಣವಾಃ ದ್ವಿಜರೆಲ್ಲಾ ಶಾಕ್ತರೆ ಶಕ್ತಿಯನ್ನು ಉಪಾಸನೆಮಾಡುತ್ತಾರೆ.

ಪುರಾಣ (123 ರಿಂದ 130) ಗರುಡ ಪುರಾಣ ಮತ್ತು ಇತರ ಕಡೆಗಳಲ್ಲಿ ಸ್ವಲ್ಪ ನಾಮಭೇದವು ಬರುತ್ತದೆ. ಆದರೆ ಮರೀಚಿ ಎಂಬ ಹೆಸರು ಎಲ್ಲಿಯೂ ಬಂದಿಲ್ಲ, ಆದುದರಿಂದ ಮರೀಚಿ ಎಂಬುದಕ್ಕೆ ಸಮಸ್ತ ಮರುದ್ಗಣಗಳ ತೇಜಸ್ಸು ಎಂದು ಅರ್ಥ ಮಾಡಬೇಕು. ಆಪ್ತಗಳಲ್ಲಿ ಮುಖ್ಯವಾದವುಗಳನ್ನು ನಾನೇ ಎಂದು ತಿಳಿದು ಉಪಾಸನೆಮಾಡುವವರಿಗೆ ಅವರವರ ಕಾಮನೆಗಳನ್ನು ನಾನೇ ಪೂರ್ತಿಮಾಡುತ್ತೇನೆ. ಇಂತಹ ಉಪಾಸಕರು ವಿಧಿಪೂರ್ವಕವಾಗಿ ನನ್ನನ್ನೇ ಶ್ರದ್ಧಾ ಭಕ್ತಿಗಳಿಂದ ಪೂಜಿಸುತ್ತಾರೆ ಎಂದು ತಿಳಿಯಬೇಕು.

ವೇದಗಳಲ್ಲಿ *ಸಾಮವೇದವು ನಾನು. ದೇವತೆಗಳಲ್ಲಿ ದೇವೇಂದ್ರನು ನಾನು. ದೇಹದಲ್ಲಿರುವ ಇಂದ್ರಿಯಗಳಲ್ಲಿ ಮನಸ್ಸು ನಾನು. ಭೂತಗಳಲ್ಲಿ ಚೇತನನು ನಾನು. ಮನಸ್ಸು ಎಲ್ಲಿ ಹೊರಟರೆ ಅಲ್ಲಿ ಇಂದ್ರಿಯಗಳು ತೆಗೆದುಕೊಂಡುಹೋಗಲ್ಪಡುತ್ತವೆ. ತಾಯಿಜೇನು ಹೊರಟರೆ ಹುಳುಗಳೆಲ್ಲಾ ಅದನ್ನು ಹೇಗೆ ಅನುಸರಿಸುವುವೋ ಹಾಗೆ. ಇಂದ್ರಿಯಗಳಲ್ಲಿ ಮನಸ್ಸು ನಾನು ಎಂದಾಗ ಚಂಚಲವಾದ ಮನಸ್ಸು ಭಗವತ್ಸ್ವರೂಪವು ಹೇಗಾಗುವುದು ? ಎಂಬಶಂಕೆ ಬರುವುದು. ಅದು ಸರಿಯಲ್ಲ. ಮನಸ್ಸು ಅಂತಃಕರಣವೃತ್ತಿ ಅದುಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಎಂದು ನಾಲ್ಕು ರೂಪವಾಗಿ ತೋರುವುದು. ಸ್ವಭಾವ, ಚಿತ್ತಾಹಂಕಾರಗಳು ಮನಸ

*) ಪರಮಾತ್ಮನ ಉಚ್ಛ್ವಾಸದಿಂದ ಹುಟ್ಟಿದುದು ವೇದ. ಅದು ಋಕ್, ಯಜುಸ್, ಸಾಮ. ಅಥರ್ವ ಎಂದು ನಾಲ್ಕು ಭಾಗವಾಗಿದೆ. ಸಾಮವು ಗಾನರೂಪವಾಗಿರುವುದರಿಂದ ಪರಮಾತ್ಮನು ಗಾನಪ್ರಿಯನಾದುದರಿಂದ ಅದು ನನ್ನ ವಿಭೂತಿ ಎಂದು ಹೇಳುತ್ತಾನೆ.

ಬುದ್ಧಿಗಳನ್ನನುಸರಿಸುವುವು. ಒಂದೇ ವೃತ್ತಿಯೇ ಚಂಚಲವಾದಾಗ ಮನಸ್ಸು ಎಂದೂ, ನಿಶ್ಚಲ ನಿರ್ಣಯಾತ್ಮಕವಾದಾಗ ಬುದ್ಧಿ ಎಂದೂ ಹೇಳಲ್ಪಡುವುದು. ಆದುದರಿಂದ ಇರುವುದು ಒಂದೇ ವೃತ್ತಿಯೇ 1 "ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ" ಎನ್ನುವಾಗ ಇಂದ್ರಿಯಗಳಿಗಿಂತ ಮನಸ್ಸು ಕೆಳಮಟ್ಟದ್ದಾಯಿತಲ್ಲವೇ ? ಇಲ್ಲ. ಮನಸ್ಸು ಪ್ರವೇಶಮಾಡದಿದ್ದರೆ ಇಂದ್ರಿಯಗಳ ಪ್ರವೃತ್ತಿಯೇ ಇಲ್ಲ. ಮನಸ್ಸಿನೊಳಗಿನ ಆಶಯ ಸಂಕಲ್ಪವು, ಮುಂದೆ ಬಂದಾಗ ಮನಸ್ಸು ದುರ್ಬಲವಾಗುವುದು. ಅದು ಇಂದ್ರಿಯಗಳನ್ನು ಮುಂದುಮಾಡಿಕೊಂಡು ವಿಷಯ ಸುಖಗಳ ಕಡೆಗೆ ತಿರುಗುವುದು. ಅದೇ ಆತ್ಮಾನಾತ್ಮ ವಿವೇಕದಿಂದ ಸಶಕ್ತವಾದರೆ ಮನಸ್ಸಿನ ದೌರ್ಬಲ್ಯವನ್ನು ಹಿಂದೂಡಿ ಇಂದ್ರಿಯಗಳಮೇಲೆ ವಿಜಯವನ್ನು ಸಾಧಿಸುವುದು. ಪರಮಾತ್ಮನು ಇಲ್ಲಿ ಹೇಳಿರುವುದು ನಿಷ್ಕಲ್ಮಷವಾದ ಪರಿಶುದ್ಧವಾದ ಮನಸ್ಸು. ಆದುದರಿಂದ ಮನಸ್ಸು ಇಂದ್ರಿಯಗಳಲ್ಲಿ ಪ್ರಧಾನ-ಶ್ರೇಷ್ಠ. ಇಂದ್ರಿಯಗಳ ರಾಜನಿದ್ದಂತೆ. ಮನಸ್ಸಿಲ್ಲದಿದ್ದರೆ ಇಂದ್ರಿಯಗಳ ವ್ಯವಹಾರವೇ ಇಲ್ಲ. ಮನಸ್ಸು ಸಶಕ್ತವಾದರೆ ಅಧ್ಯಾತ್ಮ ತತ್ತ್ವವನ್ನು ತಿಳಿದು ಮೋಕ್ಷಕ್ಕೆ ಅಧಿಕಾರಿಯಾಗುವುದು.

4) "ಭೂತಾನಾಮಸ್ಮಿ ಚೇತನಾ" ಭೂತಗಳಲ್ಲಿ ಚೇತನನೇ ನಾನು. ಪಂಚಭೂತಗಳಿಂದ ಉತ್ಪನ್ನವಾದ ಸ್ಥಾವರ ಉದ್ಭಿಜ್ಜ, ಅಂಡಜ, ಪಿಂಡಜಗಳಲ್ಲಿರುವ ಧೀ ವೃತ್ತಿಯು—ಚೇತನನು ನಾನೇ. ರುದ್ರರಲ್ಲಿ ಶಂಕರನು ನಾನಾಗಿದ್ದೇನೆ *ರುದ್ರರು ಹನ್ನೊಂದು ಜನ,

1) ಇಂದ್ರಿಯಗಳು ಬಲವತ್ತರವಾದವುಗಳು. ಮನಸ್ಸನ್ನು ಬಲಾತ್ಕಾರವಾಗಿ ಎಳೆದೊಯ್ಯುವುವು (ಅಧ್ಯಾಯ 2—ಶ್ಲೋಕ 60)

*ಹರಶ್ಚ, ಬಹುರೂಪಶ್ಚ ತ್ರ್ಯಂಬಕಶ್ಚಾಪರಾಜಿತಃ। ವೃಷಾಕಪಿಶ್ಚ

"ವಿತ್ತೇಶೋ ಯಕ್ಷ ರಕ್ಷಸಾಂ' ಯಕ್ಷರು ಮತ್ತು ರಾಕ್ಷಸರು ಇವರುಗಳಲ್ಲಿ ಕುಬೇರನು ನಾನು.

ವಸೂನಾಂ ಪಾವಕಶ್ಚಾಸ್ಮಿ *ಅಷ್ಟವಸುಗಳಲ್ಲಿ ನಾನು ಪಾವಕ-ಅಗ್ನಿಯಾಗಿದ್ದೇನೆ.

ಮೇರುಃ ಶಿಖರಿಣಾಮಹಂ। †ಪರ್ವತಗಳಲ್ಲಿ ಸುಮೇರು ಪರ್ವತವು ನಾನು. ಮೇರು ಪರ್ವತವು ಪಾತಾಳದಿಂದ ಹಿಡಿದು ಸತ್ಯ ಲೋಕದವರೆಗೂ ಇರುವುದು ಅದರಷ್ಟೇ ಎತ್ತರವಾದ ಪರ್ವತವಾವುದೂ ಇಲ್ಲ. 'ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ" ಪುರೋಹಿತರುಗಳಲ್ಲಿ ಮುಖ್ಯನಾದ ‡ಬೃಹಸ್ಪತಿಯು ನಾನು

ರಂಭುಶ್ಚ ಕಪರ್ದೀ ದೈವತಸ್ತಥಾ. ವೃಗವ್ಯಾಧಶ್ಚ ಶರ್ವಶ್ಚ ಕಪಾಲೀ ಚ ವಿಶಾಂ ಪತೇ। ಏಕಾದಶೈತೇ ಕಥಿತಾ ರುದ್ರಾಸ್ತ್ರಿಭುವನೇಶ್ವರಾಃ॥

ಹರಿವಂಶ. (೧—೩. ೫೧, ೫೨)

*) ಧರ, ಧ್ರುವ, ಸೋಮ, ವಿಷ್ಣು, ಅನಿಲ, ಅನಲ, ಪ್ರತ್ಯೂಷ, ಪ್ರಭಾ ಇವರು ಅಷ್ಟವಸುಗಳು. ಇವರಲ್ಲಿ ಅನಲ ಎಂಬ ಅಗ್ನಿಯು ನನ್ನ ವಿಭೂತಿ.

†) ಹಿಮವರ್ಷ, ಹೇಮಕೂಟ ನಿಷಧ, ನೀಲಪರ್ವತ, ಶ್ವೇತ, ಶೃಂಗವರ್ಷ ಮೇರು, ಸುಮನ್ವರ್ಷ, ಗಂಧಮಾದನ, ಮಹೇಂದ್ರ, ಮಲಯ, ಸಹ್ಯ, ಶಕ್ತಿವರ್ಷ ಋಕ್ಷವರ್ಷ, ವಿಂಧ್ಯ ಪಾರಿಪಾತ್ರ, ಕೈಲಾಸ, ಮಂದರ ಲೋಕಾ ಲೋಕ, ಉತ್ತರ ಮಾನಸಿಕ ಇವು ಇಪತ್ತು ಪರ್ವತಗಳು

‡] ಈತನು ಅಂಗಿರಾ ಮಹರ್ಷಿಯ ಪ್ರತಾಪಿಯಾದ ಪುತ್ರನು. ಸ್ವಾರೋಚಿಷಮನ್ವಂತರದಲ್ಲಿ ಬೃಹಸ್ಪತಿಯು ಸಪ್ತರ್ಷಿಗಳಲ್ಲಿ ಶ್ರೇಷ್ಠನಾಗಿದ್ದನು. ಆತನು ಬಲು ದೊಡ್ಡ ವಿದ್ವಾಂಸನು. ವಾಮನ ಅವತಾರದಲ್ಲಿ ಭಗವಂತನು ಈತನಿಂದ ಸಾಂಗೋಪಾಂಗವಾಗಿ ವೇದವನ್ನು ಕಲಿತನು. [ಬೃಹದ್ಧರ್ಮ ಪುರಾಣ] ಶುಕ್ರಾಚಾರ್ಯರಿಂದ ಸಂಜೀವಿನೀ ಮಂತ್ರದ ಉಪದೇಶವನ್ನು ಪಡೆದ ಕಚನು ಈತನ ಮಗನು ಈತನು ದೇವರಾಜನಾದ ಇಂದ್ರನಿಗೆ ಆಗಾಗ್ಯೆ ಕೊಡುವ ಅತ್ಯಮೌಲ್ಯಗಳಾದ ಉಪದೇಶಗಳು ಮಹಾಭಾರತದ ಶಾಂತಿಪರ್ವ ಅನುಶಾಸನಪರ್ವಗಳಲ್ಲಿ ವಿವರಿಸಲ್ಪಟ್ಟಿವೆ.

ಎಂದು ತಿಳಿ. ಪುರೋಹಿತನು ರಾಜರ, ಗೃಹಸ್ಥರ, ಯಜ್ಞ ಯಾಗಾದಿನಿತ್ಯಕರ್ಮಗಳನ್ನು ಮಾಡಿಸಿ ಅವರಿಗೆ ಶ್ರೇಯಸ್ಸನ್ನಿಚ್ಛನೆಯನ್ನು ಕೋರುವನು. ಆತನ ಅಭಿಪ್ರಾಯವಿಲ್ಲದೆ ಯಾವ ಆಚಾರಕ್ಕೂ ಬೆಲೆಬಾರದು. ದೇವತೆಗಳ-ಇಂದ್ರನ ಪುರೋಹಿತನು ಬೃಹಸ್ಪತಿಯು. "ಬೃಹತಾಂ ವಾಚಾಂ ಪತಿಃ" ಗೂಢಾರ್ಥವುಳ್ಳ ಬೆಲೆಬಾಳುವ ತೂಕವಾದ ಮಾತನಾಡುವನು. ಬೃಹಸ್ಪತಿಗೆ ಸಮಾನರಾದ ಪುರೋಹಿತರಾಗಲಿ ವಾಚಸ್ಪತಿಗಳಾಗಲಿ ಜಗತ್ತಿನಲ್ಲಿಲ್ಲ.

ಸೇನಾಧಿಪತಿಗಳಲ್ಲಿ ನಾನು ಸ್ಕಂದನು—ಶಿವಕುಮಾರ ಕಾರ್ತಿಕೇಯನು. ಸ್ಥಿರವಾದ ಜಲಾಶಯಗಳಲ್ಲಿ ನಾನು ಸಾಗರವು. ಸಾಗರವು ಎಲ್ಲ *ಜಲಾಶ್ರಯಗಳಿಗೆ ಶ್ರೇಷ್ಠವು. ಭೂಮಿಗೆ ಆಧಾರವಾಗಿ ಅದನ್ನು ಸುತ್ತುವರಿದಿದೆ. ನವರತ್ನಗಳ ಭಂಡಾರವಾಗಿದೆ. ಮುತ್ತಿನ ಗಣಿ. ಆದುದರಿಂದ ಅದನ್ನು ಪರಮಾತ್ಮನ ವಿಭೂತಿ ಎಂದು ಸಂಬೋಧಿಸಿದ್ದಾರೆ. (24)

---

* ಜಲಾಶಯಗಳಲ್ಲಿ ಶ್ರೇಷ್ಠವಾದ ಗಂಗಾ ನದಿಯನ್ನು ಬಿಟ್ಟು, ಉಪ್ಪು ನೀರಿನ ಸಮುದ್ರವನ್ನೇ ಶ್ರೇಷ್ಠವೆಂದು ಕರೆಯುವುದರಲ್ಲಿ ರಹಸ್ಯವಿದೆ. ಗಂಗಾನದಿಯ ಉತ್ಪತ್ತಿ ಸ್ಥಾನವು ಸಮುದ್ರವೇ ಎಂಬುದನ್ನು ಮರೆಯಬಾರದು. ಸೂರ್ಯನು ತನ್ನ ಪ್ರಖರವಾದ ಕಿರಣಗಳಿಂದ ಸಮುದ್ರದ ನೀರನ್ನು ಸುಟ್ಟು ಪ್ರತಿನಿಮಿಷಗಳಲ್ಲಿಯೂ ಸಹಸ್ರಾರು ಟನ್ ಆವಿಯನ್ನು ಆಕಾಶಕ್ಕೆ ಕಳುಹಿಸುತ್ತಾನೆ. ಅದು ಮೇಘರೂಪವಾಗಿ ವಾಯುವಿನಿಂದ ತಳ್ಳಲ್ಪಟ್ಟು ಹಿಮಾಲಯದ ಮೇಲೆ ಸುರಿದು ಭಾಗೀರಥಿ—ಗಂಗಾ ಎಂಬ ಹೆಸರನ್ನು ಪಡೆದ ಮಾತ್ರಕ್ಕೆ ಅದು ಸಮುದ್ರದಿಂದ ಬೇರೆಯಲ್ಲ. ಗಂಗೆಯ ಉತ್ಪತ್ತಿ ಸ್ಥಾನವೂ ಲಯಸ್ಥಾನವೂ ಸಮುದ್ರವೇ. ಗಾಂಭೀರ್ಯದಲ್ಲಿ ಘನತೆಯಲ್ಲಿ ಸಮುದ್ರಕ್ಕೆ ಸಮಾನವಾದುದಿಲ್ಲ. ಆದುದರಿಂದ ಅದನ್ನು ಪರಮಾತ್ಮನ ವಿಭೂತಿ ಎಂದು ಹೇಳುತ್ತಾರೆ.

"ಮಹರ್ಷಿಗಳಲ್ಲಿ ಭೃಗುಮಹರ್ಷಿಯು ನಾನು" ಭೃಗುವು ಋಷಿಗಳಲ್ಲಿ ಹಿರಿಯನು ಮಹಾ ತೇಜಸ್ವಿ ಮಹಾ ವಿಷ್ಣುವು ಅವತಾರ ಮಾಡುವಾಗ ಭೃಗುಋಷಿಗಳ ಪಾದ ಚಿಹ್ನೆಯನ್ನು ಧಾರಣೆ ಮಾಡಿಕೊಂಡು ಅವತಾರ ಮಾಡುತ್ತಾನೆ

2) "ಗಿರಾಮಸ್ಮ್ಯೇಕಮಕ್ಷರಂ" ಏಕಾಕ್ಷರವಾದ ಓಂಕಾರವು ಅಕ್ಷರಗಳಿಗೆಲ್ಲಾ ಆದಿ ಅದು ತ್ರಿಮೂರ್ತ್ಯಾತ್ಮಕ ವಾದುದು ಸೃಷ್ಟಿಗೆ ಆದಿಕಾರಣವಾದುದು ಆದುದರಿಂದ ಸೃಷ್ಟಿಮಾಡುವಸಂಕಲ್ಪ ಉಂಟಾದೊಡನ ಅವನ್ನು ನಾನು ಉಚ್ಚಾರಮಾಡುತ್ತೇನೆ ಅದರಿಂದ ಸೃಷ್ಟಿಯ ರಚನಾ ಪಾಲನಾ ಸಂಹಾರ ಕಾರ್ಯಗಳು ನಡಯುತ್ತಲೇ ಇರುತ್ತವೆ ಏಕಾಕ್ಷರವಾದ ಓಂಕಾರವು ತೈಲಧಾರಯಂತೆ ಅವಿಚ್ಛಿನ್ನ ವಾಗಿ ಯಾವ ಅಡಚಣೆಯೂ ಇಲ್ಲದೆ ಜಗತ್ತಿನ ತುಂಬ ವ್ಯಾಪಿಸಿದೆ

ಓಂಕಾರವು ಮಂತ್ರಗಳಿಗೆಲ್ಲಾ ಆದಿಯಾಗಿದೆ ಇದು ಪರಬ್ರಹ್ಮವಾಚಕ ವಾದುದು ಪರಬ್ರಹ್ಮನ ಸ್ಮರಣೆಗೆ ಮುಖ್ಯ ವಾದ ನಾಮವು ಓಂಕಾರವು ಇದು ಮಿಕ್ಕ ಬೀಜಾಕ್ಷರಗಳಿಗೆ ಆದಿಯಾಗಿದೆ ಹಂಸಃ ಸೋಽಹಂ ಐಂ ಕ್ಲಾಂ ಕ್ಲೀಂ ಕ್ಲೂಂ ಕ್ಲೈಂ ದ್ರಾಂ ಹ್ರಾಂ ಹ್ರೀಂ ಹ್ರೂಂ ಮುಂತಾದುವುಗಳು ಬೀಜ ಮಂತ್ರಗಳು ಪ್ರತಿಯೊಂದು ಬೀಜಮಂತ್ರವೂ ಒಂದೊಂದು ಶಕ್ತಿಯುಳ್ಳದ್ದು

ಅನುಲೋಮವಾಗಿ ವಿಲೋಮವಾಗಿ ಉಚ್ಚರಿಸಲ್ಪಡುವ ಬೇರೆ ಬೇರೆ ದೇವತಾಮಂತ್ರಗಳ ಆದಿಯಲ್ಲಿ ಓಂಕಾರವು ಉಚ್ಚರಿಸಲ್ಪಡು ತ್ತದೆ ನಮೋ ಭಗವತೇ ವಾಸುದೇವಾಯ, ನಮಃ ಶಿವಾಯ,

* ಭೃಗುವು ಬ್ರಹ್ಮಮಾನಸ ಪುತ್ರರಾದ ಮಹರ್ಷಿಗಳಲ್ಲಿ ಶ್ರೇಷ್ಠನು ಭೃಗುರ್ಮರೀಚಿರತ್ರಿಶ್ಚ ಅಂಗಿರಾಃ ಪುಲಹಃ ಕ್ರತುಃ॥ ಮನುರ್ದಕ್ಷೋ ವಸಿಷ್ಠಶ್ಚ ಪುಲಸ್ತ್ಯಶ್ಚೇತಿ ತೇ ದಶ ॥ ವಾಯುಪುರಾಣ (59-89)

ಮುಂತಾದ ಮಂತ್ರಗಳ ಆದಿಯಲ್ಲಿ ಓಂಕಾರವು ಪ್ರಾರಂಭಿಸಲ್ಪಡು ತ್ತದೆ ಏಕಾಕ್ಷರವಾದ ಈ "ಓಂ" ಕಾರಕ್ಕೆನಾಲ್ಕು ಮಾತ್ರೆ ಅಥವಾ ಪಾದಗಳು ಇವೆ (ಅ+ಉ+ಮ+ಅರ್ಧಮಾತ್ರೆ)
ಇದರ ಮೊದಲನೆಯ ಪಾದ "ಅ" ದಿಂದ ಪೃಥ್ವಿಯು ಉತ್ಪನ್ನ ವಾಯಿತು ಋಚೆಗಳಿಂದ ಕೂಡಿದ ಋಗ್ವೇದವೂ ಬ್ರಹ್ಮನೂ, ಅಷ್ಟವಸುಗಳೂ, ಗಾಯತ್ರಿಯೂ, ಗಾರ್ಹಪತ್ಯಾಗ್ನಿಯೂ ಉತ್ಪನ್ನರಾದರು

ಎರಡನೆಯ ಪಾದವು "ಉ" ಇದರಿಂದ ಅಂತರಿಕ್ಷ ಲೋಕವೂ ಯಜುರ್ವೇದವೂ, ವಿಷ್ಣುವೂ,ತ್ರಿಷ್ಟುಪ್ ಛಂದಸ್ಸೂ ದಕ್ಷಿಣಾಗ್ನಿಯೂ ಹುಟ್ಟಿದವು

ಮೂರನೆಯ ಮಾತ್ರೆಯು "ಮ" ಇದರಿಂದ ದೇವಲೋಕವೂ ಸಾಮವೇದವೂ ಏಕಾದಶರುದ್ರರೂ ದ್ವಾದಶಾದಿತ್ಯರೂ ಜಗತೀ ಛಂದಸ್ಸೂ ಆಹವನೀಯಾಗ್ನಿಯೂ ಉತ್ಪನ್ನರಾದರು

ನಾಲ್ಕನೆಯ ಪಾದವು ಅರ್ಧಮಾತ್ರೆ (ೕ) ಇದೇ ಚಂದ್ರ ಲೋಕವು

ಸೋಹಂ ಮಂತ್ರದಿಂದ ಕೂಡಿದ ಅಥರ್ವವೇದವು ಇದ ರಿಂದ ಉತ್ಪನ್ನವಾಗಿರುವುದು ಸಂವರ್ತಕಾಗ್ನಿಯೂ ಋಷಿನಾಮಕ ವಾದ ಅಥರ್ವಣಿಕಾಗ್ನಿಯೂ ಇದೇ ಇದರಲ್ಲಿ ನಲವತ್ತೊಂಭತ್ತು ಮರುತ್ತುಗಳು ಇವೆ ಇದೇ ವಿರಾಟ್‌ಸ್ವರೂಪವು ಅರ್ಧಮಾತ್ರಾ ಬಿಂದು ರೂಪ ಪ್ರಕಾಶ ಮಾನವಾದ ತುರೀಯ ಸ್ವರೂಪವು ಇದೇ ಆಗಿರುವುದರಿಂದ ಇದರಿಂದ ಓಂಕಾರ ವಾಗುತ್ತದೆ. ಎಂಟನೆಯ

---

ಈ ನಾಲ್ಕು ಪಾದಗಳಲ್ಲಿಯೂ ಸ್ಥೂಲ ಸೂಕ್ಷ್ಮ, ಬೀಜ ಮತ್ತು ಸಾಕ್ಷಿ ಈ ನಾಲ್ಕು ಪ್ರಕಾರಗಳಾದ ಶರೀರಗಳು ಸೇರಿಕೊಂಡಿವೆ

ಅಧ್ಯಾಯವಲ್ಲಿ 13 ನೇ ಶ್ಲೋಕದಲ್ಲಿ ಹೇಳಿರುವ ಏಕಾಕ್ಷರವಾದ ಬ್ರಹ್ಮವು ಇದೇ

1) ಯಜ್ಞಗಳಲ್ಲೆಲ್ಲಾ ಜಪಯಜ್ಞವು ಶ್ರೇಷ್ಠ ಈ ಜಪ ಯಜ್ಞವು ಮೂರು ರೂಪವಾಗಿದೆ ಉಚ್ಚಸ್ವರ, ಉಪಾಂಶು, ಮಾನಸಿಕ ಎಂದು

ಪರಮಾತ್ಮನ ಒಂದು ನಾಮಮಂತ್ರವನ್ನೇ ಅನೇಕಾವರ್ತಿ ಉಚ್ಚರಿಸುವ ಅಖಂಡಭಜನೆ ಸ್ತೋತ್ರಗಳು ಉಚ್ಚಸ್ವರಜಪ ದೇಹ ವನ್ನು ಅಲುಗಾಡಿಸದೆ ತುಟಿಯನ್ನು ಮಾತ್ರ ಉಪಯೋಗಿಸುವುದು ಉಪಾಂಶು ದೇಹ ಇಂದ್ರಿಯಗಳನ್ನು, ಅಲುಗಾಡದೆ ಮನಸ್ಸಿನಲ್ಲಿಯೇ ಜಪಿಸುವುದು ಮಾನಸಿಕಜಪ ಉಚ್ಚಸ್ವರಕ್ಕಿಂತ ಉಪಾಂಶುವು ಉತ್ತಮ ಅದಕ್ಕಿಂತ ಮಾನಸಿಕಜಪವು ಶ್ರೇಷ್ಠ

ಸ್ಥಾವರಗಳಲ್ಲಿ ಚಲಿಸದೇ ಒಂದೇ ಕಡೆ ಇರುವ ವಸು ಗಳಲ್ಲಿ ಹಿಮಾಲಯವು ನನ್ನ ಸ್ವರೂಪವು (25) ೨

ವೃಕ್ಷಗಳಲ್ಲೆಲ್ಲಾ ಅಶ್ವತ್ಥವೇ ನಾನು

ವೃಕ್ಷಗಳು ಆರು ಜಾತಿಗಳಾಗಿವೆ

---

ಅಶ್ವಮೇಧ ಅಗ್ನಿಷ್ಟೋಮ ಮುಂತಾದ ಯಜ್ಞಗಳಲ್ಲಿ ಪಶುಹಿಂಸೆ ಧನ ಸಂಗ್ರಹ, ಪರಾಶ್ರಯ, ಮುಂತಾದ ಅನೇಕ ದೋಷಗಳಿವೆ ಜಪಯಜ್ಞವು ಸ್ವತಂತ್ರವಾದುದು ಇದಕ್ಕೆ ಪರಾಶ್ರಯವಿಲ್ಲ

---

2) ಹಿಂದೆ ಪರ್ವತಗಳಲ್ಲಿ ಮೇರು ಪರ್ವತವು ನಾನು ಎಂಬುದಕ್ಕೂ ಈಗ ಹಿಮಾಲಯವು ನಾನು ಎಂದು ಹೇಳುವುದಕ್ಕೂ ವ್ಯತ್ಯಾಸವನ್ನು ಗುರ್ತಿಸಬೇಕು ಮೇರುವಿಗಿಂತ ಎತ್ತರವಾದ ಪರ್ವತವಿಲ್ಲ, "ಹಿಮಾಲಕ್ಕಿಂತ" ಗಾತ್ರ ಸ್ಥಿರತೆಗೆ ಸರಿತೂಗುವ ಮತ್ತೊಂದು ಬೆಟ್ಟವಿಲ್ಲ ಮೇರುವು ನಮ್ಮ ಕಣ್ಣಿಗೆ ಕಾಣುವುದಿಲ್ಲ ಅದು ಸತ್ಯಲೋಕದ ಕೊನೆಯವರೆಗೆ ವ್ಯಾಪಿಸಿದೆ ಹಿಮಾಲಯವು ನಮ್ಮ ದೃಷ್ಟಿಗೆ ಗೋಚರವಾದ ಅತ್ಯಂತ ದೊಡ್ಡಪರ್ವತ

1) ಅಗ್ರಬೀಜಾ – ಕೊಂಬೆಗೆಳಲ್ಲಿ ಬೀಜ ಬಿಡವ ವೃಕ್ಷ
2) ಮೂಲಜಾ – ಕಮಲ ಕುಮುದ ಕೇಸರೀ ಮುಂತಾಡುವು.
3) ಪರ್ವಯೋನಿ – ಗಂಟುಗಳಲ್ಲಿ ಬೀಜಶಕ್ತಿ ಇರುವುವು ಬೆತ್ತ ಮುಂತಾದ ದಂಡ ಜಾತಿ
4) ಸ್ಕಂಧಜಾ – ಅರಳಿ ಆಲ ಬಸರಿ ಮುಂತಾದುವು ಕೊಂಬೆಗಳು ಚಿಗುರುವುವು
5) ಬೀಜರುಹಾ – ಶಾಲ್ಯ ಮುಂತಾದುವು
6) ಸಂಮೂರ್ಧಜಾ – ವಿವಿಧ ಗರಿಕೆ ಹುಲ್ಲು ಮುಂತಾದುವು

ಇವುಗಳಲ್ಲಿ ಅಶ್ವತ್ಥಕ್ಕೆ ಏಕೆ ಹೆಚ್ಚುಗಾರಿಕೆ ? ಹೂ ಫಲಗಳ ದೃಷ್ಟಿಯಿಂದ ತೆಂಗು ಮಾವು ಮುಂತಾದುವುಗಳಲ್ಲಿ ಯಾವುದನ್ನಾದರೂ ಹೇಳಬಹುದಾಗಿತ್ತು ಇದರಲ್ಲಿ ಧಾರ್ಮಿಕವಾದ ಪ್ರಾಶಸ್ತ್ಯವಿದೆ ಸನಾತನ ಧರ್ಮಾವಲಂಬಿಗಳು ಇದನ್ನು ಬ್ರಹ್ಮ ವಿಷ್ಣು ರುದ್ರಾತ್ಮಕವಾದುದೆಂದು ನಂಬುತ್ತಾರೆ ಬಲು ಸಣ್ಣ ಬೀಜದಿಂದ ಅತ್ಯಂತ ದೊಡ್ಡದಾದ, ಬಹುಕಾಲ ಜೀವಿಸಬಲ್ಲ, ಅನೇಕ ಪಕ್ಷಿಗಳಿಗೆ ಆಶ್ರಯವಾದ, ಈ ವೃಕ್ಷವು ಬ್ರಹಾಂಡ ಸ್ವರೂಪವಾಗಿದೆ ಎಂದು ಗುರ್ತಿಸಬಹುದು ಇದರ ನೆರಳಿನಲ್ಲಿ ತಪಸ್ವಿಗಳನ್ನು ಆಕರ್ಷಿಸುವ ಶಕ್ತಿಯು ಇದೆ ಇದರ ಕೆಳಗೆ ಕುಳಿತು ತಪಸ್ಸು ಮಾಡಿದರೆ ಅತಿಜಾಗ್ರತೆಯಾಗಿ ಸಿದ್ಧಿಯಾಗುತ್ತದ ಅಶ್ವತ್ಥವು ನೋಡುವುದಕ್ಕೆ ದೊಡ್ಡದಾದರೂ ಅದರೊಳಗೆಲ್ಲಾ ಟೊಳ್ಳು ಅದುದರಿಂದ ಅದನ್ನು ಸಂಸಾರಕ್ಕೆ ಹೋಲಿಸುತ್ತಾರೆ ಅಸಾರವಾದ ಆದರೆ ಅವಿನಾಶಿಯಾದ, ಸಂಸಾರದೊಳಗೆ ಜಗತ್ತಿಗೆ ಸಾರಭೂತವಾದ ಪರಬ್ರಹ್ಮ ಶಕ್ತಿಯು ಅಡಗಿರುವಂತೆ, ನೋಡು

ವುದಕ್ಕೆ ದೊಡ್ಡದಾದವರೂ ಒಳಗೆಲ್ಲಾ ಟೊಳ್ಳಾಗಿರುವ, ಆದರೆ, ಮಹಾ ವಿದ್ಯುತ್‌ಶಕ್ತಿಯನ್ನು ಒಳಗೊಂಡಿರುವ ಈ ವೃಕ್ಷವು ಪರಿಗ್ರಹಿಸಲ್ಪಟ್ಟಿದೆ

"ದೇವರ್ಷಿಗಳಲ್ಲಿ ನಾರದನು ನಾನು" ನಾರದನು ದೇವತೆಗಳಲ್ಲಿ ಋಷಿತ್ವವನ್ನು ಪಡೆದಿರುವುದರಿಂದ ಶ್ರೇಷ್ಠನು ಆ ಶ್ರೇಷ್ಠತೆಯು ನನ್ನ ಸ್ವರೂಪವು

"ಗಂಧರ್ವರಲ್ಲಿ ಚಿತ್ರರಥನು ನಾನು" ಚಿತ್ರರಥನು ಗಂಧರ್ವ ರಾಜನು ಗಾನ ವಿದ್ಯಾ ಮತ್ತು ಯುದ್ಧವಿದ್ಯೆಗಳಲ್ಲಿ ಈತನು ಪ್ರವೀಣನು

"ಸಿದ್ಧರಲ್ಲಿ ಕಪಿಲನು ನಾನು" ಕಪಿಲ ಮಹರ್ಷಿಯು ಸಿದ್ಧ ಪುರುಷನು ಸಾಕ್ಷಾತ್ ಪರಮಾತ್ಮನ ಅವತಾರವು ಕರ್ದಮ ಋಷಿ ಮತ್ತು ದೇವಹೂತಿಯ ಮಗನು ಪರಾಪೇಕ್ಷೆಯೇ ಇಲ್ಲದೆ ಜನ್ಮದೊಡನೆಯೇ ಧರ್ಮ-ಜ್ಞಾನ ವೈರಾಗ್ಯಗಳನ್ನು ಜೊತೆ ಗೂಡಿಕೊಂಡು ಬಂದ ಮಹಾಪುರುಷನು ಸಾಂಖ್ಯಶಾಸ್ತ್ರ ಪ್ರವರ್ತಕನು ತಮ್ಮ ತಾಯಿಯಾದ ದೇವಹೂತಿಗೆ ಜ್ಞಾನವನ್ನು ಉಪದೇಶ ಮಾಡಿದನು

"ಅಶ್ವಗಳಲ್ಲಿ ಉಚ್ಚೈಶ್ರವಸ್ಸು ನಾನು" (26)

ದೇವಲೋಕಾಧಿಪತಿ ಇಂದ್ರನ ಕುದುರೆಯು ಉಚ್ಚೈಶ್ರವಸ್ಸು ದೇವ-ದಾನವರು ಅಮೃತಕ್ಕಾಗಿ ಕ್ಷೀರಸಾಗರವನ್ನು ಕಡೆದಾಗ ಅಲ್ಲಿ ಹುಟ್ಟಿದುದು ಉಚ್ಚೈಶ್ರವಸ್ಸು ಅಶ್ವಗಳಲ್ಲಿ ಅದು ಶ್ರೇಷ್ಠವಾದುದ ರಿಂದ ಅದೇ ನನ್ನ ಸ್ವರೂಪ

"ಆನೆಗಳಲ್ಲಿ ಐರಾವತವು ನಾನು", ಇದು ಕ್ಷೀರಸಾಗರದಲ್ಲಿಯೇ ಹುಟ್ಟಿದುದು ಇಂದ್ರನ ವಟ್ಟದಾನೆ ಬಿಳೀಬಣ್ಣದ ನಾಲ್ಕುದಂತಗಳಿಂದೊಡಗೂಡಿದ ಈ ಆನೆಯು ಜಗತ್ತಿನ ಆನೆಗಳಲ್ಲೆಲ್ಲಾ ಶ್ರೇಷ್ಠನಾದುದರಿಂದ ಅದು ನನ್ನ ಸ್ವರೂಪವೆಂದು ತಿಳಿಯಬೇಕು

1)"ನರರಲ್ಲಿ ನರಾಧಿಪನು ನಾನು" ಶಾಸ್ತ್ರೋಕ್ತ ಲಕ್ಷಣಗಳಿಂದೊಡಗೂಡಿದ ಧರ್ಮಪರಾಯಣನಾದ ರಾಜನು ಪ್ರಜೆಗಳನ್ನು ಪಾಪಕರ್ಮಗಳಿಂದ ತಪ್ಪಿಸಿ ಧರ್ಮದಲ್ಲಿ ಪ್ರವೃತ್ತರಾಗುವಂತೆ ಮಾಡುತ್ತಾನೆ ಆದುದರಿಂದ ಇತರ ಮನುಷ್ಯರಿಗಿಂತಲೂ ಅವನು ಶ್ರೇಷ್ಠನು ಇಂತಹ ರಾಜರಲ್ಲಿ ಪರಮಾತ್ಮಶಕ್ತಿಯು ಸಾಧಾರಣ ಮನುಷ್ಯರಿಗಿಂತಲೂ ಅಧಿಕವಾಗಿರುತ್ತದೆ ಆದಪರಿಂದ ಪರಮಾತ್ಮನು ಮನುಷ್ಯರಲ್ಲಿ ರಾಜನನ್ನು ನಾನು ಎಂದು ಹೇಳಿರುತ್ತಾನೆ

ಈ ಭೂಮಂಡಲದಲ್ಲಿ ಸಹಸ್ರಾರು ರಾಜರುಗಳಿರುತ್ತಾರೆ ಅವರಲ್ಲಿ ಬಹುತೇಕ ಹೆಚ್ಚು ಜನರು ದುಷ್ಟರು ಅತಿಕಾಮಿಗಳು ಮಿತಿಮೀರಿದ ಕೋಪವುಳ್ಳವರು ಲೋಭಿಗಳೂ ಸ್ವಾರ್ಥಿಗಳೂ ಆದ, ಅಹರ್ನಿಶಿಯೂ ಭೋಗದಲ್ಲಿಯೇ ಆಸಕ್ತರಾಪ ಇಂತಹ ರಾಜರುಗಳು ಪ್ರಜೆಗಳ ದುಃಖ ನಿವಾರಣೆಗೆ ಗಮನ ಕೊಡದೆ ತಮ್ಮ ವಿಷಯಸುಖಕ್ಕೆ ಹೆಚ್ಚು ಲಕ್ಷ್ಯಕೊಡುತ್ತಾರ ಸಮಯ ಬಂದರೆ

---

1) ಈಗ ಜಗತ್ತಿನಲ್ಲಿ ಅನುವಂಶಿಕ ರಾಜರು ಕಡಿಮೆಯಾಗಿ ಪ್ರಜಾರಾಜ್ಯವೇ ಹೆಚ್ಚಾಗುತ್ತಿದೆ ಪ್ರಜೆಗಳಿಂದ ಆರಿಸಲ್ಪಟ್ಟ ಪ್ರತಿನಿಧಿಯೇ ರಾಜ ಚಕ್ರವರ್ತಿಯಂತಾಗುತ್ತಾನೆ ಅವರೆ ಆತನು ಯೋಗ್ಯನಾಗಿ ಧರ್ಮ ಪರಾಯಣನಾಗಿ ಪ್ರಜಾವತ್ಸಲನಾಗಿ ಕರ್ತವ್ಯ ಕರ್ಮವನ್ನು ಎಚ್ಚರಿಕೆಯಿಂದ ನಡೆಸಿದರೆ ಮಾತ್ರ ಅಲ್ಲಿ ಭಗವಂತನ ಈಶ್ವರೀಶಕ್ತಿಯು ಪ್ರಕಟವಾಗವುದು ಇದಿಲ್ಲದೆ ಬರೀ ಸ್ವಾರ್ಥಿಗಳಾಗಿ ದುರಾಚಾರಿಗಳಾದ ಪ್ರಜಾಪಾಲರಿಂದ ಧರ್ಮವೂ ನಾಶವಾಗಿ ಪ್ರಜೆಗಳಿಗೂ ಪೀಡೆ-ಕಿರುಕುಳ ದುಃಖಗಳಾಗಿ ಅವರು ಇಹವನ್ನೂ ಪರವನ್ನೂ ಕಳೆದುಕೊಂಡು ಪತಿತರಾಗುವರು ]

ಯಾವ ಅನ್ಯಾಯಕ್ಕೂ ಹೇಸುವವರಲ್ಲ. ಛಲ-ಕಪಟ-ರಾಗ-ದ್ವೇಷ -ಮದ ಮತ್ಸರ ಮುಂತಾದುವುಗಳ ಬಲೆಯನ್ನೇ ಬೀಸಿ ಲೋಕವನ್ನು ಸ್ವಾಧೀನ ಮಾಡಿಕೊಳ್ಳುತ್ತಾರೆ. ಕೇವಲ ಶಿಶ್ನೋದರ ಪರಾಯಣ ರಾಗಿರುವ ಅವರಿಂದ ಪ್ರಜೆಗಳಿಗೆ ದುಃಖವೇ ಹೊರತು ಸುಖವಿಲ್ಲ. ಇಂತಹ ನರೇಂದ್ರರು ಪರಮಾತ್ಮನ ಸ್ವರೂಪವಾಗುವುದು ಹೇಗೆ ಎಂಬ ಶಂಕೆ ಬರುವುದು ಸಹಜ. ಆದರೆ ಇಲ್ಲಿ ಧರ್ಮ ಪರಾಯಣನಾದ ಪ್ರಜಾವತ್ಸಲನಾದ ರಾಜನಲ್ಲಿಯೇ ಪರಮಾತ್ಮ ಶಕ್ತಿಯು ಪ್ರಕಟ ವಾಗುವುದೆಂದೂ ಇತರ ರಾಜನಾಮಧಾರೀ ದುಷ್ಟರಲ್ಲಿ ಅದು ಹಾರಿಹೋಗುವುದೆಂದೂ ತಿಳಿಯಬೇಕು.

"ಆಯುಧಗಳಲ್ಲಿ ವಜ್ರಾಯುಧವೂ ಧೇನುಗಳಲ್ಲಿ ಕಾಮ ಧೇನುವೂ ಸಂತಾನೋತ್ಪಾದಕ ಶಕ್ತಿಗಳಲ್ಲಿ ಮನ್ಮಥನೂ ಸರ್ಪಗಳಲ್ಲಿ ವಾಸುಕಿಯೂ ನಾನೇ."

ಆಯುಧಗಳಲ್ಲಿ ಇಂದ್ರನ ವಜ್ರಾಯುಧವು ಶ್ರೇಷ್ಠ. ಅದು ದಧೀಚಿ ಋಷಿಯ ತಪಸ್ಸಿನಿಂದಲೂ ಪರಮಾತ್ಮನ ಪವಿತ್ರ ತೇಜಸ್ಸಿ ನಿಂದಲೂ ವಿರಾಜಮಾನವಾಗಿದೆ. ಆದುದರಿಂದ ಅದು ಅಮೋಘ ವಾದುದು. ವೃತ್ರಾಸುರನ ವಧೆಗಾಗಿ ಇಂದ್ರನಿಗೆ ಪ್ರಾಪ್ತವಾದುದು.

ಗೋವುಗಳಲ್ಲಿ ಕಾಮಧೇನುವು ಶ್ರೇಷ್ಠ. ಕಾಮಧೇನುವು ದೇವ ಲೋಕದ ವಸ್ತು. ಇದು ಕೇಳಿದುದನ್ನು ಕೊಡುವ ಶಕ್ತಿಯುಳ್ಳದು. ಇದರ ಹೊಟ್ಟೆಯಲ್ಲಿಯೇ ಶಿವನ ವಾಹನವಾದ ನಂದಿಯು ಹುಟ್ಟಿ ರುದು. ಇದೂ ಸಮುದ್ರ ಮಥನ ಕಾಲದಲ್ಲಿಯೇ ಹುಟ್ಟಿದುದು.

ಸಂತಾನೋತ್ಪನ್ನ ಮಾಡುವ ಶಕ್ತಿಯು ವಿಷ್ಣು ಪುತ್ರನಾದ

ಮನ್ಮಥನು. ಈತನು ಅನಂಗನಾದರೂ ಸ್ತ್ರೀ ಪುರುಷರಲ್ಲಿ ಪರಸ್ಪರ ಸಂಭೋಗೇಚ್ಛೆಯನ್ನು ಹುಟ್ಟಿಸಿ ಆ ಮೂಲಕ ಸಂತಾನೋತ್ಪತ್ತಿಗೆ ಕಾರಣನಾಗಿದ್ದಾನೆ. ಈಶ್ವರನ ಕೋಪದಿಂದ ಆತನ ದೇಹವು ಸುಟ್ಟು ಹೋಗಿ ಭಸ್ಮವಾದರೂ ಪಾರ್ವತೀ ಪರಿಣಯವಾಗಿ ಕುಮಾರ ಸ್ವಾಮಿಯು ಉತ್ಪತ್ತಿ ಯಾಗುವುದಕ್ಕೆ ಈತನೇ ಕಾರಣನು. ಈ ವಿಷ್ಣುಪುತ್ರನು ಸರ್ವವ್ಯಾಪಿ. ಇವನು ಪ್ರವೇಶಮಾಡದ ಸ್ಥಳವೇ ಇಲ್ಲ. ಧರ್ಮಕ್ಕೆ ವಿರುದ್ಧವಲ್ಲದ ಕಾಮವೂ ನಾನೇ ಎಂದು ಏಳನೇ ಅಧ್ಯಾಯದಲ್ಲಿ ಹೇಳುವುದರಿಂದ ಧರ್ಮ ಪ್ರಜಾ ಸಂಪಾದನಕ್ಕೆ ಕಾರಣನಾದ ಮನ್ಮಥನಲ್ಲಿ ಪರಮಾತ್ಮ ಶಕ್ತಿಯು ಅಡಗಿದೆ. ಆದುದ ರಿಂದ ಅವನು ಶ್ರೇಷ್ಠ.

ವಾಸುಕಿಯು ಸರ್ಪಗಳಲ್ಲಿ ವಿಷಭರಿತ ಸರ್ಪಗಳಲ್ಲಿ ರಾಜನು. ಪರಮಾತ್ಮ ಭಕ್ತನು. ಆದುದರಿಂದ ಈತನು ಸರ್ಪಗಳಲ್ಲಿ ಶ್ರೇಷ್ಠನು.

ನಾಗರಲ್ಲಿ ಅನಂತನೂ ಜಲಚರಗಳಲ್ಲಿ ವರುಣನೂ ಪಿತೃ ಗಳಲ್ಲಿ ಅರ್ಯಮನೂ ಶಾಸನ (ಶಿಕ್ಷೆ) ಮಾಡುವರಲ್ಲಿ ಯಮನೂ ಆಗಿದ್ದೇನೆ.

"ನಾಗರಲ್ಲಿ ಅನಂತನು ನಾನು'.

ನಾಗರಲ್ಲಿ–ವಿಷರಹಿತ ಸರ್ಪಗಳಲ್ಲಿ ಅನಂತನು ಶ್ರೇಷ್ಠ. ಸರ್ಪಗಳಲ್ಲಿ ಎರಡು ಜಾತಿಗಳಿವೆ. ಒಂದು ವಿಷಭರಿತ ಮತ್ತೊಂದು ವಿಷರಹಿತ. ವಿಷಭರಿತ ಸರ್ಪಗಳಲ್ಲಿ ವಾಸುಕಿ ಮತ್ತು ತಕ್ಷಕ. ಇವರಿಬ್ಬರು ಸುರಸೆಯ ಮಕ್ಕಳು. ಇವರಿಬ್ಬರೂ ಸರ್ಪಗಳಿಗೆ ಅಧಿಪತಿಗಳು. ಆದರೆ ವಾಸುಕಿಯ ವಿಷವು ತಕ್ಷಕನದಕ್ಕಿಂತಲೂ ತೀಕ್ಷ್ಣವಾದುದು. ಭಯಂಕರವಾದುದು. ಆದುದರಿಂದ ಅವನು ಶ್ರೇಷ್ಠ

ಹಾಗೆಯೇ ವಿಷರಹಿತ ಸರ್ಪಗಳಲ್ಲಿ ಅನಂತನು ಶ್ರೇಷ್ಠ. ವಾಸುಕಿಯದು ಸಾಧಾರಣ ಸರ್ಪಜಾತಿ. ನಾಗಸರ್ಪವು ದೇವಜಾತಿ. ಅದರ ಸಂಪೂರ್ಣ ಆಕಾರವು ಮನುಷ್ಯನಂತೆಯೇ ಇದ್ದು ಕೊನೆಯಲ್ಲಿ ಬಾಲಮಾತ್ರವಿರುತ್ತದೆ ಅನಂತನು ವಿಷ್ಣುವಿಗೆ ಹಾಸಿಗೆಯಾಗಿ ಸೇವೆಮಾಡುತ್ತಾನೆ ಈ ಪೃಥ್ವಿಯನ್ನು ತಲೆಯ ಮೇಲೆ ಹೊತ್ತುಕೊಂಡಿರುವನು ಆದುದರಿಂದ ಈತನು ಶ್ರೇಷ್ಠ.

ಜಲಚರಗಳಿಗೆ ಅಧಿಪತಿಯು ವರುಣನು ಲೋಕ ಪಾಲಕರುಗಳಲ್ಲಿ ಒಬ್ಬನಾಗಿ ಪಶ್ಚಿಮ ದಿಕ್ಕನ್ನು ರಕ್ಷಿಸುತ್ತಾನೆ ಪರಮಾತ್ಮ ಭಕ್ತನಾದುದರಿಂದ ಸರ್ವಶ್ರೇಷ್ಠನೆಂದು ಹೇಳಲ್ಪಡುತ್ತಾನೆ

ಕವ್ಯವಾಹ, ಅನಲ, ಸೋಮ, ಯಮ, ಅರ್ಯಮಾ, ಅಗ್ನಿಷ್ವಾತ್ತ, ಬರ್ಹಿಷದ್, ಈ ಏಳುಜನ ಪಿತೃ ದೇವತೆಗಳು ಇವರಲ್ಲಿ ಪ್ರಧಾನನಾದವನು ಅರ್ಯಮಾ ಎಂಬ ಪಿತೃ ದೇವತೆಯು.

ಶಿಕ್ಷಾದಂಡಕ್ಕೆ ಅಧಿಕಾರಿಯು ಯಮನೇ ಸರಿ ಪಕ್ಷಪಾತ ರಹಿತ ನ್ಯಾಯ ವಿಧಾನಕ್ಕೆ-ದೇವ-ತಿರ್ಯಗ್ ಮನುಷ್ಯರೆಲ್ಲರಿಗೂ ಯಮನೇ ಶ್ರೇಷ್ಠಾಧಿಕಾರಿ ಆದುದರಿಂದ ಯಮನು ನನ್ನ ಸ್ವರೂಪ ಎಂದು ಹೇಳಿದ್ದಾನೆ (29)

“ದೈತ್ಯರಲ್ಲಿ ಪ್ರಹ್ಲಾದನೂ, ಎಣಿಕೆ ಮಾಡುವವರಲ್ಲಿ ಕಾಲ ಪುರುಷನೂ ಮೃಗಗಳಲ್ಲಿ ಮೃಗೇಂದ್ರನೂ ಪಕ್ಷಿಗಳಲ್ಲಿ ಗರುಡನೂ ನಾನಾಗಿದ್ದೇನೆ”

ದಿತಿಯ ವಂಶಜರು ದೈತ್ಯರು ಅವರಲ್ಲಿ ಪ್ರಹ್ಲಾದನು ಉತ್ತಮನೆಂದು ಹೇಳಲ್ಪಡುತ್ತಾನೆ

ಸಾಮಾನ್ಯವಾಗಿ ದೈತ್ಯರೆಲ್ಲಾ ತಾಮಸ ರಾಜಸ ಗುಣ

ಗಳವರು ಪ್ರಹ್ಲಾದನು ಶುದ್ಧ ಸಾತ್ವಿಕ, ಜ್ಞಾನಿ, ಭಕ್ತ, ಧರ್ಮಾತ್ಮ ಆದುದರಿಂದ ಇವನಲ್ಲಿ ಪರಮಾತ್ಮ ತೇಜಸ್ಸು ಇದೆ

ಕಾಲಪುರುಷನು ಜಗತ್ತನ್ನು ಕ್ಷಣ ಮುಹೂರ್ತ ದಿನ,ಸಂವತ್ಸರ ಗಳರೂಪದಲ್ಲಿ ಅಳೆಯುತ್ತಿರುತ್ತಾನೆ ಹಿಂದೆ ಹೋದ ಕಾಲವು ಮುಂದೆ ಬರುವುದಿಲ್ಲ ಜಗತ್ತೆಲ್ಲಾ ಕಾಲನ ವಶವಲ್ಲಿದೆ ಅವ ನಿಂದಲೇ ಸೃಷ್ಟಿ ಸ್ಥಿತಿ ಲಯಗಳು ನಡೆಯುತ್ತಿರುವುವು ಕಾಲನ ಮುಂದೆ ಯಾವ ಶಕ್ತಿಯೂ ನಡೆಯುವುದಿಲ್ಲ ಇದರಿಂದ ಯಾರೂ ತಪ್ಪಿಸಿಕೊಳ್ಳಲಾರರು ರಾಜ, ಭಿಕ್ಷುಕ ,ಸಂನ್ಯಾಸಿ, ಯೋಗಿ ಎಲ್ಲರೂ ಕಾಲನ ಅಧೀನವೇ ಪ್ರತಿಯೊಬ್ಬರೂ ಕಾಲನಿಗೆ ಅಧೀನರಾಗಿ ಮರಣ ಹೊಂದಲೇ ಬೇಕು ಈ ಕಾಲನು ಆದ್ಯಂತರಹಿತನು ಇವನು ಅಜರ, ಅಮರ, ಅವಿನಾಶಿ, ಆದುದರಿಂದ ಇವನು ಪರ ಬ್ರಹ್ಮಸ್ವರೂಪವೇ ಸರಿ

ಮೃಗಗಳಲ್ಲಿ-ಚತುಷ್ಪಾದಜಂತುಗಳಲ್ಲಿ ಸಿಂಹವು ವೀರ್ಯ, ಬಲ, ಗಾಂಭೀರ್ಯಗಳಲ್ಲಿ ಶ್ರೇಷ್ಠ ಮೃಗರಾಜ ಎಂದು ಇದಕ್ಕೆ ಹೆಸರು ಅದರ ಶ್ರೇಷ್ಠತೆಯಿಂದ ಅವನ್ನು ತನ್ನ ಸ್ವರೂಪವೆಂದು ಹೇಳುತ್ತಾನೆ

"ಆಕಾಶಗಾಮಿ ಪಕ್ಷಿಗಳಲ್ಲಿ ಗರುಡನು ಶ್ರೇಷ್ಠ ಅದು ಪಕ್ಷಿ ಜಾತಿಗೆಲ್ಲಾ ರಾಜ ಬಹಳ ಬಲಶಾಲಿಯಾದುದು ವಿಷ್ಣುಭಕ್ತ ನಾಗಿ ವಿಷ್ಣು ವಾಹನವಾಗಿರುವುದರಿಂದ ಇದೇ ತನ್ನ ಸ್ವರೂಪ ಎಂದು ಹೇಳಿದ್ದಾನೆ (30)

"ಪವಿತ್ರವಾಗಿ ಮಾಡುವವರಲ್ಲಿ (ವೇಗವಂತರಲ್ಲಿ) ವಾಯುವೂ ಶಸ್ತ್ರಧಾರಿಗಳಲ್ಲಿ ಶ್ರೀರಾಮನೂ ಮತ್ಸ್ಯಗಳಲ್ಲಿ ಮಕರವೂ(ಮೊಸಳೆ) ನದಿಗಳಲ್ಲಿ ಭಾಗೀರಥಿಯೂ ನಾನೇ"

ವಾಯುವು ಎಲ್ಲವನ್ನೂ, ಮಣ್ಣು-ಜಲ-ಮುಂತಾದುವನ್ನೆಲ್ಲಾ ಪವಿತ್ರವಾಗಿ ಮಾಡುವುದು ಪವತಾಂ ಎಂಬ ಶಬ್ದಕ್ಕೆ ವೇಗವಾಗಿ-ಜಾಗ್ರತೆಯಾಗಿ ಚಲಿಸುವವನು ಎಂದೇ ಭಾಷ್ಯಕಾರರು ಅರ್ಥ ಮಾಡಿದ್ದಾರೆ ಮಣ್ಣು, ಜಲ, ಮುಂತಾದುವು ತಮ್ಮ ತಮ್ಮ ಪರಿಸ್ಥಿಯೊಳಗೆ ಅಶುದ್ಧವಸ್ತುಗಳನ್ನು ಪರಿಶುದ್ಧ ಮಾಡುವುವು ವಾಯುವಾದರೋ ಭೂಮಿಯು ಸುತ್ತಿನ ಮೇಲಿನ ಅಂತರಿಕ್ಷದಲ್ಲಿರುವ ಅಶುದ್ಧ ಪರಮಾಣುಗಳನ್ನು ಕ್ಷಣಮಾತ್ರದಲ್ಲಿ ಶುದ್ಧಮಾಡುವುದು. ವಾಯುವಿಗಿಂತ ಬಲವಾದುದಾದುದು ಜಗತ್ತಿನಲ್ಲಿಲ್ಲ ವಾಯು ಎಗೆ ಕೋಪ ಬಂದರೆ ದೊಡ್ಡ ದೊಡ್ಡ ಮರಗಳು ಬುಡಮಟ್ಟ ಕಿತ್ತು ತಲೆಕೆಳಗಾಗಿಬೀಳುವುವು ಭೂಮಿಯು ಅಲುಗಿ ಭೂಕಂಪವಾಗುವುದು ವಾಯುವಿನ ಶಕ್ತಿಗೂ ವೇಗಕ್ಕೂ ಎದುರಾದ ಶತ್ರುವಾವುದೂ ಇಲ್ಲ ಆದುದರಿಂದ ಇದರ ಶ್ರೇಷ್ಠತೆಯು ಪರಮಾತ್ಮ ಸ್ವರೂಪ

ಶಸ್ತ್ರ ಧಾರಿಗಳಲ್ಲಿ ಶ್ರೀ ರಾಮನನ್ನು ಸರಿಗಟ್ಟುವವರಾರೂ ಇಲ್ಲ ಧನುಸ್ಸಿನಲ್ಲಿ ಒಂದಾವರ್ತಿ ತೊಟ್ಟ ಬಾಣವು ಸಂಕಲ್ಪವನ್ನನುಸರಿಸಿ ಲೋಕತ್ರಯವನ್ನು ಸುತ್ತಿ ಪುನಃ ಅವನ ಬತ್ತಳಿಕೆಯೊಳಗೇ ಬಂದು ಸೇರುವುದು ಶ್ರೀ ರಾಮನು ಒಂದೇ ಬಾಣದಿಂದ ಖರ-ದೂಷಣ ಮುಂತಾದ ಹದಿನಾಲ್ಕು ಸಾವಿರ ದೈತ್ಯರನ್ನು ನಾಶಮಾಡಿದನು

ಮತ್ಸ್ಯಗಳಲ್ಲಿ ಮೊಸಳೆಯು ಶ್ರೇಷ್ಠ ಆದುದರಿಂದ ಅದರಲ್ಲಿ ಪರಮಾತ್ಮ ಶಕ್ತಿಯು ಅಡಗಿದೆ ಹರಿಯುವ ನದಿಗಳಲ್ಲಿ ಗಂಗೆಯು ಶ್ರೇಷ್ಠ-ಪವಿತ್ರ ಜಲದ ಆಳ, ಪವಿತ್ರತೆ, ಸ್ವಚ್ಛತೆ, ಗುಣ-ಪೂರ್ಣ ಪ್ರವಾಹ ಮುಂತಾದವುಗಳಲ್ಲಿ ಗಂಗೆಯನ್ನು ಸರಿಗಟ್ಟುವ ನದಿಯೇ ಇಲ್ಲ ಈ ಗಂಗೆಯಲ್ಲಿ ಶೀತಲತ್ವ-ಸಾಧುತ್ವ-ಸ್ವಚ್ಛತ್ವ

ಷುಂತಾದ ಅನೇಕ ಗುಣಗಳಿವೆ ಬೇರೆ ನದಿಗಳ ನೀರನ್ನು ಪಾತ್ರೆಗಳಲ್ಲಿಟ್ಟರ ಒಂದು ತಿಂಗಳೊಳಗಾಗಿ ಕೆಟ್ಟು ಹೋಗುತ್ತದೆ, ಕ್ರಿಮಿಗಳು ಹುಟ್ಟಿ ವಿಕಾರವನ್ನು ಹೊಂದುತ್ತದ ಗಂಗಾಜಲವು ಮಾತ್ರ ವರ್ಷಾನುಗಟ್ಟಲೆ ಪಾತ್ರೆಗಳಲ್ಲಿದ್ದರೂ ಗುಣವೂ ವ್ಯತ್ಯಾಸ ವಾಗುವುದಿಲ್ಲ ಕಡುವುದೂ ಇಲ್ಲ

ಗಂಗಾನದಿಯ ತೀರದಲ್ಲಿ ಅನೇಕ ಋಷಿಗಳು ತಪಸ್ಸು ಮಾಡಿ ಸಿದ್ಧಿ ಹೊಂದಿದ್ದಾರೆ ಪಾಪ ನಾಶಕವಾದ ಪುಣ್ಯ ಪ್ರದವಾದ ಈ ಭಾಗೀರಥಿಯನ್ನು ನದಿಗಳಲ್ಲೆಲ್ಲಾ ಶ್ರೇಷ್ಠವೆಂದು ಹೇಳುವುದರಲ್ಲಿ ಅಭ್ಯಂತರವೇನಿದೆ ? (31)

"ಸೃಷ್ಟಿಗಳ ಆದಿಯೂ, ಮಧ್ಯವೂ, ಅಂತವೂ ನಾನು ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯು ನಾನು ತತ್ವನಿರ್ಣಯಕ್ಕಾಗಿ ಮಾಡಲ್ಪಡುವ ವಾದವೂ ನಾನೇ"

"ಅನಾದಿಕಾಲದಿಂದಲೂ ನನ್ನ ಪ್ರಕೃತಿಯ ಮೂಲಕ ನಡೆಯಲ್ಪಡುತ್ತಿರುವ ಸೃಷ್ಟಿ ಸ್ಥಿತಿ ಲಯಗಳು ನಾನೇ ನನ್ನ ಸ್ವರೂಪವೇ

1) ಈಗ ಕಾಣುವಂತಹ ಜಗತ್ತಿನಂತೆ ಅನೇಕಾವೃತ್ತಿ ಸೃಷ್ಟಿ ಗಳು ಆಗಿ ಹೋಗಿವೆ ಅವುಗಳಿಗೆ ಮುಂಚೆಯೂ ನಾನು ಇದ್ದೇನೆ ಅವುಗಳು ಉಪಸಂಹಾರವಾದ ಮೇಲೆಯೂ ನಾನು ಇರುತ್ತೇನೆ ಸೃಷ್ಟಿಗಳ ಮಧ್ಯಕಾಲದಲ್ಲಿಯೂ ನಾನು ಇರುತ್ತೇನೆ ಆದಿಯಲ್ಲಿ ಬ್ರಹ್ಮನಾಗಿ ಸೃಷ್ಟಿಮಾಡುತ್ತೇನೆ ಮಧ್ಯದಲ್ಲಿ ವಿಷ್ಣುವಾಗಿ ಪಾಲನೆ ಮಾಡುತ್ತೇನೆ ಅಂತ್ಯದಲ್ಲಿ ರುದ್ರರೂಪದಿಂದ ಸಂಹಾರ ಮಾಡು

1) ಧಾತಾ ಯಥಾಪೂರ್ವ ಮಕಲ್ಪಯತ್

ತ್ರೀಣಿ ಆದುದರಿಂದ ಅಲೌಕಿಕಶಕ್ತಿಯು ಪರಮಾತ್ಮನ ವಿಭೂತಿಯು

"ಆತ್ಮನಿಗೆ ಸಂಬಂಧಿಸಿದುದು ಅಧ್ಯಾತ್ಮ"

ಯಾವುದು ಆತ್ಮನಿಗೆ ಸಂಬಂಧಿಸಿದುದೋ ಯಾವುದರಿಂದ ಆತ್ಮತತ್ವವು ಪ್ರಕಾಶವಾಗುವಂತೆ ಮಾಡಲ್ಪಡುವುದೋ ಯಾವುದರ ಪ್ರಭಾವದಿಂದ ಅನಾಯಾಸವಾಗಿಯೇ ಬ್ರಹ್ಮಸಾಕ್ಷಾತ್ಕಾರವಾಗುವುದೋ ಅದು ಅಧ್ಯಾತ್ಮ ವಿದ್ಯೆ-ಬ್ರಹ್ಮವಿದ್ಯೆ ಜಗತ್ತಿನಲ್ಲಿರುವ ಎಲ್ಲ ವಿದ್ಯೆಗಳೂ ಇದಕ್ಕಿಂತ ಕೆಳಮಟ್ಟದವುಗಳು, ಅವುಗಳಿಂದ ಅಜ್ಞಾನ ಬಂಧನವು ಕತ್ತರಿಸಲ್ಪಡುವುದಕ್ಕೆ ಬದಲಾಗಿ ಅದು ಬಲವಾಗುತ್ತದೆ ಆದರೆ ಈ ಬ್ರಹ್ಮ ವಿದ್ಯೆಯಿಂದ ಅಜ್ಞಾನದ ಗಂಟು ಒಡೆದು ಹೋಗುತ್ತದೆ ಪರಮಾತ್ಮ ಸ್ವರೂಪದ ಯಥಾರ್ಥಜ್ಞಾನವಾಗುತ್ತದೆ ಇದಲ್ಲದೆ ಉಳಿದ ವಿದ್ಯೆಗಳು ಕೇವಲ ಶರೀರ ಪೋಷಣೆಗೆ ಮಾತ್ರ ಉಪಯೋಗವಾದವುಗಳು ಈ ಅಧ್ಯಾತ್ಮ ವಿದ್ಯೆಯು ಜೀವನನ್ನು ಶರೀರ ಬಂಧನದಿಂದ ಮುಕ್ತನನ್ನಾಗಿ ಮಾಡುತ್ತದೆ ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ, ಎಂಬ ತಾಪತ್ರಯ ಗಳಿಂದ ಬಿಡುಗಡೆ ಮಾಡಿಸಿ ಶಾಶ್ವತ ಸುಖವನ್ನು ಹೊಂದಿಸಿ ಕೊಡುತ್ತದೆ

ಹರಿಕಥಾ, ಭಗವದ್ಭಜನೆ, ಬ್ರಹ್ಮಜ್ಞಾನ ತತ್ವಜ್ಞಾನ, ಕರ್ಮಮಾರ್ಗ, ಜ್ಞಾನಮಾರ್ಗ, ಉಪಾಸನಾಮಾರ್ಗ ಸಿದ್ಧಾಂತ ಮಾರ್ಗ, ಪ್ರವೃತ್ತಿಮಾರ್ಗ, ನಿವೃತ್ತಿಮಾರ್ಗ, ಯೋಗಸ್ಥಿತಿ ಧ್ಯಾನಸ್ಥಿತಿ ವಿದೇಹದೆಶೆ, ಆಸನ, ಮಂತ್ರ ಲಕ್ಷ್ಯ, ಮುದ್ರಾ, ಧ್ವನಿ ಮುಂತಾದುವೆಲ್ಲಾ, ಈ ಅಧ್ಯಾತ್ಮ ವಿದ್ಯೆಯ ಅಂಗಗಳು ಮನುಷ್ಯನು ಈ ಅಧ್ಯಾತ್ಮ ವಿದ್ಯೆಯಿಂದಲೇ-ಯಶಸ್ವಿ. ಕೀರ್ತಿ

ವಂತ, ಬಲವಂತ, ಕೀರ್ತಿವಂತ, ದಯಾವಂತ, ವಿದ್ವಾಂಸ ಎಂಬ ಮುಂತಾದ ಯೋಗ್ಯತೆಗಳನ್ನು ಪಡೆಯಬಹುದು

"ಶಾಸ್ತ್ರಾರ್ಥ ಮಾಡುವವರಲ್ಲಿನ ವಾದವೇ ನಾನು'

ವಾದವು ಮೂರುವಿಧವಾಗಿದೆ ಜಲ್ಪ, ವಿತಂಡ, ವಾದ ಎಂದು

ಜಲ್ಪ-ವಾದ ಮಾಡುವ ಇಬ್ಬರಲ್ಲಿ ಒಬ್ಬನು ತನ್ನ ಪಕ್ಷವನ್ನು ಸಾಧನ ಮಾಡುವುದಕ್ಕಾಗಿ ಇತರರನ್ನು ದೂಷಿಸುವುದು

ವಿತಂಡ=ಕೇವಲ ಎದುರು ಪಕ್ಷವನ್ನು ಖಂಡನ ಮಾಡುವುದಕ್ಕಾಗಿ ಲೋಪ ದೋಷಗಳನ್ನೇ ತೋರಿಸುತ್ತಾ ತನ್ನ ಪಕ್ಷವನ್ನೂ ಸಿದ್ಧಮಾಡಲಾರದ, ಬರೀ ಗಂಟು ವ್ಯಾಜ್ಯದಲ್ಲಿ ಕೂಸ ಮುಟ್ಟಿಸುವುದು

ವಾದ=ಗುರು ಶಿಷ್ಯರ ಮಧ್ಯೆ-ಆತ್ಮತತ್ವನಿರ್ಣಯ ಮಾಡುವುದಕ್ಕಾಗಿ ರಾಗದ್ವೇಷಗಳನ್ನು ಬಿಟ್ಟು ಮಾಡಲ್ಪಡುವ ಶಾಸ್ತ್ರಾರ್ಥವು -ವಾದವೆನ್ನಲ್ಪಡುವುದು

ಮೊದಲನೆಯ ಎರಡು, ಜಲ್ಪ ವಿತಂಡಗಳು ದ್ವೇಷ, ಹಿಂಸೆ, ಕ್ರೋಧ ಅಭಿಮಾನಗಳನ್ನು ಹುಟ್ಟಿಸಿ ಅಶಾಂತಿಯ ವಾತಾವರಣವನ್ನು ಕಲ್ಪಿಸುವುವು ಆದುದರಿಂದಲೇ ಶಾಸ್ತ್ರಾರ್ಥ ನಿರ್ಣಯಾತ್ಮಕವಾದ ವಾದವನ್ನು ತನ್ನ ವಿಭೂತಿಯೆಂದು ಪರಮಾತ್ಮನು ಕರೆದಿದ್ದಾನೆ (32)

"ಅಕ್ಷರಗಳಲ್ಲಿ ಅಕಾರವು ನಾನು ಸಮಾಸಗಳಲ್ಲಿ ದ್ವಂದ್ವ ಸಮಾಸವು ನಾನು ಅಕ್ಷಯ ಕಾಲನು ಕಾಲನಿಗಿಂತಲೂ, ಮಹತ್ತಾದ ಮಹಾ ಕಾಲನು ನಾನು ಸರ್ವತೋಮುಖನಾಗಿ ವಿರಾಟ್

ಸ್ವರೂಪನಾಗಿ ಸಮಸ್ತವನ್ನು ಧಾರಣೆ ಪೋಷಣೆ ಮಾಡುವವನಾಗಿ ಇರುವವನೇ ನಾನು "

ಈ ಶ್ಲೋಕದಲ್ಲಿ, ಸೂಕ್ಷ್ಮದಲ್ಲಿ ಸೂಕ್ಷ್ಮವಾದ ವಿಭೂತಿಯು ವರ್ಣನೆ ಮಾಡಲ್ಪಡುತ್ತದೆ ಕೇವಲ ವಿದ್ವಾಂಸರಾದವರು- ಅಕ್ಷರ ತತ್ವವನ್ನ ಗ್ರಹಣ ಮಾಡುವವರು ಮಾತ್ರ ಗ್ರಹಿಸಬಹುದು

ಅಕ್ಷರಗಳಲ್ಲಿ ಮೊದಲನೆಯ ಅಕ್ಷರ"ಅ" ಈ ಅಕಾರವು ಶರೀರ ಧಾರಣೆ ಮಾಡಿರುವವನ ಪ್ರಾಣದಂತೆ ಅಕ್ಷರ ಮಾಲಿಕೆ ಯಲ್ಲಿ ಶ್ರೇಷ್ಠತೆಯನ್ನ ಹೊಂದಿದೆ ಇದು ಅಕ್ಷರಗಳಿಗೆಲ್ಲಾ ರಾಜನಂತ ಇದಿಲ್ಲದಿದ್ದರ ಯಾವ ಅಕ್ಷರವನ್ನೂ ಉಚ್ಚಾರಮಾಡ ಲಾಗುವುದಿ ಇಲ್ಲ ಸ್ವರ ವ್ಯಂಜನರೂಪ ಅಕ್ಷರಮಾಲಿಕಯಲ್ಲಿ ಇದು ಮೊದಲನೆಯದು ಅದೇ ಎಲ್ಲ ಅಕ್ಷರಗಳಲ್ಲೂ ವ್ಯಾಪಕ ವಾಗಿರುವುದು " ಅಕಾರೋವೈ ಸರ್ವಾ ವಾಕ್ " (ಐತರೇಯ ಬ್ರಾಹ್ಮಣ 3-೧) ಎಂದು ಉಪನಿಷತ್ತು ಹೇಳುತ್ತದ

ಎಲ್ಲಿವಾಣಿಯೂ ಈ ಅ ಕಾರವೇ

ಮನುಷ್ಯನು ಬಾಯಿ ಬಿಡುತ್ತಲೇ ಉಚ್ಚರಿಸಲ್ಪಡುವ ಮೊದಲನೆಯ ಅಕ್ಷರವು "ಅ" ಮುಖವನ್ನು ಅಧೋಮುಖ ವಾಗಿ ಮಾಡಿ ಬಾಯಿ ಬಿಟ್ಟರೆ "ಇ" ಆಳುವಾಗ ಇದೇ 'ಉ" ಆಗುತ್ತದೆ ಅ,ಇ,ಉ, ಈ ಮೂರೇ ಮುಖ್ಯ ಸ್ವರಗಳು ಬಾಕಿ ಅಕ್ಷರಗಳು ದೀರ್ಘ, ಪ್ಲುತ, ಗುಣ ವೃದ್ಧಿಗಳು ಇವರ ಮರ್ಮವನ್ನು ವ್ಯಾಕರಣ ಶಾಸ್ತ್ರಾಭ್ಯಾಸಿಗಳುಬಲ್ಲರು ಈ "ಅ" ಕಾರವು ಸರ್ವ ದೇವತಾ ಸ್ವರೂಪ ವಾದುದ ಸರ್ವ ಶಕ್ತಿ ಮಯವಾದುದು

ಶಿವ ಪಾರ್ವತಿ ಸಂವಾದದಲ್ಲಿ ಶಿವನು ಈ ರೀತಿ ಹೇಳುತ್ತಾನೆ

"ಅ" ಅಕಾರವು ಶರದೃತುವಿನ ಪೌರ್ಣಮಿಯ ಚಂದ್ರನಂತೆ ಪ್ರಕಾಶ ಮಾನವಾಗಿದೆ ಇದರಲ್ಲಿ ಐದು ಕೋಣಗಳಿವೆ ಇದರಲ್ಲಿ ಪಂಚ ದೇವತೆಗಳು ವಾಸಮಾಡುತ್ತಾರೆ ಇದು ಮೂರು ಗುಣ ಗಳಿಂದ ಕೂಡಿದೆ ನಿರ್ಗುಣ ಸ್ವರೂಪವಾಗಿದೆ ರಜ-ತಮ-ಸತ್ವಗಳಿಂದ ಮಿಶ್ರಿತವಾಗಿದೆ ಸ್ವಯಂ ಕೈವಲ್ಯದಾಯಕವಾದ ಮೂರ್ತಿಯಾಗಿದೆ ಇದರ ಮೇಲೆ (ಂ) ಬಿಂದುವನ್ನು ಇಟ್ಟರ ಸ್ವಯಂ ಪ್ರಕೃತಿ ರೂಪವೇ ಆಗುತ್ತದೆ ಜಗತ್ತಿನಲ್ಲಿ ಹುಟ್ಟುವ ಸಮಸ್ತ ಜೀವಗಳೂ ತಾಯಿಯ ಗರ್ಭದಿಂದ ಹೊರ ಬರುವಾಗ ಅ, ಅಂ ಅಂ ಎಂದು ಉಚ್ಚರಿಸುತ್ತಲೇ ಅಳುತ್ತವೆ ಆದುದರಿಂದ ಅಂ, ಓಂ, ಪ್ರಕೃತಿ ಸ್ವರೂಪವೇ ಆಗಿರುತ್ತದೆ

"ಅ" ಕಾರವು ಪ್ರಣವದ ಪ್ರಥಮ ಮಾತ್ರೆ ಇದನ್ನು ಉಚ್ಚರಿಸುತ್ತಲೇ ಸಂಪೂರ್ಣ ಜಗತ್ತಿನ ಉತ್ಪತ್ತಿಯಾಗುತ್ತದೆ ಇದನ್ನು ನಿಸ್ಸಂದೇಹವಾಗಿ ಪ್ರಕೃತಿ ಸ್ವರೂಪವೆಂದು ಕರಯ ಬಹುದು "ಓಂ" ಕಾರಕ್ಕೆ ಮೀಸಲಾಗಿರುವ ಉಪನಿಷತ್ತು ಮಾಂಡೂಕ್ಯ

ಆದುದರಿಂದ "ಅ" ಅಕ್ಷರವು ಎಲ್ಲಾ ಅಕ್ಷರಗಳಿಗೂ ಅಧಿಪತಿ ಆದುದರಿಂದ ಇದು ಪರಮಾತ್ಮನ ವಿಭೂತಿ

ಎರಡು ಅಥವಾ ಹೆಚ್ಚಗೆ ಪದಗಳನ್ನು ಒಟ್ಟಿಗೇ ಸೇರಿಸಿ ಒಂದು ಪದವನ್ನಾಗಿ ಮಾಡುವುದು ಸಮಾಸ ಧ್ವಂದ್ವಸಮಾಸವು ಸಮಾನಾರ್ಥವುಳ್ಳ ಎರಡು ಸ್ವತಂತ್ರ ಪದಗಳನ್ನು ಸೇರಿಸುತ್ತದೆ

ಇಬ್ಬರು ವಿದ್ವಾಂಸರು-ಅಥವಾ ಗುರುಶಿಷ್ಯರು ಒಂದು ಕಡೆ ಸೇರಿ ಮಂತ್ರಾರ್ಥ ವಿಚಾರ ಮಾಡುತ್ತಾ ಪದಗಳನ್ನು ಶೋಧನೆ ಮಾಡಿ ಒಂದುನಿರ್ಣಯಕ್ಕೆ ಬರುವುದೂ ಸಾಮಾಸಿಕ ಎನ್ನಲ್ಪಡುತ್ತದೆ

ಯಾವ ಅರ್ಥದಿಂದ ವಿಶೇಷ ರಹಸ್ಯವು ತಿಳಿಯಲ್ಪಡುತ್ತದೆಯೋ ಅದು (†) ದ್ವಂದ್ವ ಎನ್ನಲ್ಪಡುತ್ತದೆ

4) ಅಕ್ಷಯಕಾಲನೂ ವಿಶ್ವತೋಮುಖನಾದ ಧಾತನು ನಾನೇ ಆಗಿರುವೆನು

2) ಪರಮಾತ್ಮನು (‡) ಕಾಲನಿಗೆ ಕಾಲನು ಮುವತ್ತನೆಯ ಶ್ಲೋಕದಲ್ಲಿ ನಿರ್ದಿಷ್ಟಪಟ್ಟ ಕಾಲನು ಕಲ್ಪ, ಯುಗ, ವರ್ಷ ಮಾಸ, ಅಯನ, ದಿನ, ಘಳಿಗೆ, ಕ್ಷಣ, ಮುಂತಾದ ಹೆಸರಿನಲ್ಲಿ ಕರೆಯಲ್ಪಡುವ ಸಮಯಕ್ಕೆ ಅಧಿಪತಿ ಇವನು ಪ್ರಕೃತಿಯ ಒಂದು ಭಾಗ, ಮಹಾಪ್ರಳಯದಲ್ಲಿ ಇವನು ಇರುವುದಿಲ್ಲ ಆದರೆ ಅಕ್ಷಯ ಕಾಲನು ಹಾಗಲ್ಲ ಆತನು ಶಾಶ್ವತ ಸನಾತನ ಅನಾದಿ ಅನಂತ, ನಿತ್ಯ ಪರಬ್ರಹ್ಮ ಪರಮಾತ್ಮನೆ ಸಾಕ್ಷಾತ್ ಸ್ವರೂಪವು-ಈತನು ಪ್ರಕೃತಿಗೆ ಮೀರಿದವನು ವಿಶ್ವತೋಮುಖನಾದ-ಎಲ್ಲೆಡೆಯಲ್ಲಿಯೂ ತುಂಬಿರುವ ವಿರಾಟ್‌ಸ್ವರೂಪನಾದ ಧಾತಾ ಅಂದರ ಜಗತ್ತನ್ನು ಪಾಲನೆ ಪೋಷಣೆಮಾಡುವ ಜಗದ್ರೂಪೀ ಜನಾರ್ದನನು ಪರಮಾತ್ಮನ ಅತ್ಯಂತಶ್ರೇಷ್ಠವಾದ ವಿಭೂತಿಯು (33)

ಸಮಸ್ತವನ್ನೂ ನಾಶಮಾಡುವ ಮೃತ್ಯುವು ನಾನೆ ಹಾಗೆಯೇ ಸಮಸ್ತವನ್ನೂ ಹುಟ್ಟಿಸುವ ಕಾರಣನೂ ನಾನೇ ಸ್ತ್ರೀಯರಲ್ಲಿ ಕೀರ್ತಿ, ಶ್ರೀ, ವಾಕ್ ಸ್ಮೃತಿ, ಮೇಧಾ, ಧೃತಿ ಕ್ಷಮಾ ಇವು ನಾನೇ

---

†) ದ್ವಂದ್ವೋ ರಹಸ್ಯಃ

‡) ಕಾಲನಲ್ಲಿ ಮೂರು ಬಗೆಗಳಿವೆ

1) ಸಮಯ ಸೂಚಕ ಕಾಲ

2) ಪ್ರಕೃತಿರೂಪ ಕಾಲ-ಮಹಾಪ್ರಳಯದ ನಂತರ ಎಷ್ಟು ಕಾಲ ಪ್ರಕೃತಿಯು ಸಾಮ್ಯಾವಸ್ಥೆಯು ಇರುವುದೊ ಅದೇ ಪ್ರಕೃತಿರೂಪ ಕಾಲ

3) ನಿತ್ಯ, ಶಾಶ್ವತ, ವಿಜ್ಞಾನಾನಂದ ಘನ ಪರಮಾತ್ಮ

ಸಮಸ್ತ ಜಗತ್ತನ್ನು ಹರಣಮಾಡುವ-ನಾಶ ಮಾಡುವ ಮೃತ್ಯುವು ಪರಮಾತ್ಮನ ವಿಭೂತಿಯೇ

ಪರಮಾತ್ಮನೇ ಮೃತ್ಯುರೂಪನಾಗಿ ಸಮಸ್ತವನ್ನೂ ಸಂಹಾರ ಮಾಡುತ್ತಾನೆ ಮೃತ್ಯುವಿಗೆ ಸರ್ವಹರನೆಂದು ಹೆಸರು ನೃಪ ಚೋರಾದಿಗಳು ಹೊರಗಿನ ಧನ, ಕನಕಾದಿಗಳನ್ನು, ಹರಣ ಮಾಡಿದರೆ ಮೃತ್ಯುವು ಸರ್ವವನ್ನೂ ಹರಣ ಮಾಡುತ್ತದೆ "ಈಶ್ವರ ಗ್ರಾಸಸ್ತುರೀಯಸ್ತುರೀಯಃ" ಎಂದು ನೃಸಿಂಹ ತಾಪಿನೀ ಉಪನಿಷತ್ತಿನಲ್ಲಿ ಹೇಳಿದೆ ಸಾಕ್ಷಾತ ಪರಬ್ರಹ್ಮನಾದ ಜಗದೀಶನೇ ಪ್ರಳಯಕಾಲದಲ್ಲಿ ಚತುರ್ದಶ ಭುವನಗಳನ್ನೂ ಸಂಹಾರಮಾಡುತ್ತಾನೆ ಸೃಷ್ಟಿರಚನಾ ಪಾಲನಾಸಂಹಾರ ಕರ್ತೃಗಳಾದ ತ್ರಿಮೂರ್ತಿಗಳಿಂದ ಹಿಡಿದು ಎಲ್ಲವೂ ನಾಶವಾಗುತ್ತದೆ ಆದುದರಿಂದ ಈಶ್ವರನು ತುರೀಯಕ್ಕೆ ತುರೀಯನು ಸೃಷ್ಟಿ ಸ್ಥಿತಿ ಲಯಗಳ ನಂತರ ಉಳಿಯತಕ್ಕ ಕಾರಣ ಪ್ರಕೃತಿಗೂ ಮೀರಿದ ಮಹಾ ಕಾರಣನು, ಮಹೇಶ್ವರನು

ಸೃಷ್ಟಿಸಂಹಾರದ ನಂತರ ಪುನಃ ಸೃಷ್ಟಿಗೆ ಕಾರಣ ಕರ್ತನೂ ಪರಮಾತ್ಮನೇ.

ಕೀರ್ತಿಶ್ರೀ, ಶ್ರೀ, ವಾಕ್ ಧೃತಿ, ಮೇಧಾ, ಸ್ಮೃತಿ, ಕ್ಷಮಾ, ಈ ಏಳೂ ಸ್ತ್ರೀರೂಪ ಶಕ್ತಿಗಳು ಕೀರ್ತಿ ಎಂಬುದು ಧರ್ಮ ಮೂಲಕವಾದಒಳ್ಳೆಯ ಹೆಸರು ಶ್ರೀಃ ಎಂಬುದು ಶರೀರ ಕಾಂತಿ, ಸೌಂದರ್ಯ ವಾಕ್ ಎಂದರೆ ಅರ್ಥಗರ್ಭಿತ ಮಾತುಗಳು, ಸ್ಮೃತಿ ಎಂಬುದು ಸ್ಮರಣಶಕ್ತಿಯು ಮೇಧಾ ಎಂಬುದು ಬುದ್ಧಿಶಕ್ತಿಯು

ಧೃತಿ=ಧೈರ್ಯವು, ಕ್ಷಮಾ ಎಂಬುದು ಇತರರ ಅಪರಾಧಗಳನ್ನು ಮನ್ನಿಸುವುದು ಅಥವಾ ಸುಖ ದುಃಖಗಳಲ್ಲಿ ಮನಸ್ಸು

ಮೇರಿವಪ್ಪದಂತೆ ತಡೆಯುವ ಗುಣ ಈ ಏಳು ಸ್ತ್ರೀರೂಪ ದಿವ್ಯ ಶಕ್ತಿಗಳೂ-ಪರಮಾತ್ಮನ ವಿಭೂತಿಯೇ

ಈ ನಾರೀ ರೂಪ ಶಕ್ತಿಗಳು ಮನಸ್ಯರಲ್ಲಿ ಪ್ರವೇಶಿಸಿದರೆ ಅವರ ಜೀವನವು ಭವ್ಯವಾಗುವುದು-ದಿವ್ಯವಾಗುವುದು ಈ ಏಳ ರಲ್ಲಿ ಒಂದೊಂದಾದರೂ ನಮ್ಮನ್ನು ಅನುಗ್ರಹಿಸಿದರೆ ಸಾಕು ನಮ್ಮ ಜನ್ಮ ಸಾರ್ಥಕವಾದಂತೆಯೆ,

ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ, ಈ ಏಳೂ ಜನ ದೇವತಾಸ್ತ್ರೀಯರೂ ಪ್ರಸಿದ್ಧರಾಗಿದ್ದಾರ

ಸ್ವಾಯಂಭುವ ಮನುವಿನ ಮಗಳು ಪ್ರಸೂತಿಯು ದಕ್ಷ ಪ್ರಜಾಪತಿಯನ್ನು ವಿವಾಹವಾಗಿ ಇಪ್ಪತ್ತು ನಾಲ್ಕು ಕನ್ಯೆಯರನ್ನು ಪಡೆದಳು ಇವರಲ್ಲಿ ಕೀರ್ತಿ ಮೇಧಾ ಧೃತಿ ಇವರುಗಳು ಧರ್ಮ ಪುರುಷನನ್ನು ವಿವಾಹವಾದರು ಸ್ಮೃತಿಯು ಅಂಗಿರಾ ಎಂಬುವ ನನ್ನು, ಕ್ಷಮಾ ಎಂಬುವಳು ಪುಲಹನನ್ನೂ ಮದುವೆಯಾದಳು ಶ್ರೀ ಎಂಬುವಳು ಮಹರ್ಷಿ ಭೃಗುವಿನ ಕನ್ಯೆಯು ದಕ್ಷನ ಮಗಳಾದ ಖ್ಯಾತಿಯ ಗರ್ಭದಲ್ಲಿ ಹುಟ್ಟಿದವಳು ಈಕೆಯನ್ನು ಮಹಾ ವಿಷ್ಣುವು ವಿವಾಹವಾದನು ವಾಕ್ ಎಂಬುವಳು ಬ್ರಹ್ಮನಕನ್ಯೆಯು. ಈ ಏಳುಜನ ಸ್ತ್ರೀಯರೂ ಯಾವ ಯಾವ ಗುಣಕ್ಕೆ ಪ್ರಸಿದ್ಧ ರಾಗಿದ್ದಾರೆಯೋ, ಅವರು ಆಯಾ ಗುಣಕ್ಕೆ ಅಧಿಷ್ಠಾತೃ ದೇವತ ಗಳು ಜಗತ್ತಿನ ಸ್ತ್ರೀಯರಲ್ಲಿ ಶ್ರೇಷ್ಠರೆಂದು ತಿಳಿಯಲ್ಪಟ್ಟಿದ್ದಾರೆ

ಕೀರ್ತಿ-ಯಶಸ್ಸು ಇದು ಪ್ರತಿಯೊಬ್ಬರೂ ಅಪೇಕ್ಷಿಸ ಬೇಕಾದುದು ಯಾರ ಜೀವನದಲ್ಲಿ ಕೀರ್ತಿ-ಯಶಸ್ಸು ಬೆರೆಯು

ವುದಿಲ್ಲವೋ ಅವನು ಬದುಕಿದ್ದರೂ ಸತ್ತಂತೆಯೇ

ಸತ್ಕರ್ಮಮಾಡಿ ಲೋಕೋಪಕಾರ ಪ್ರಮಾಡುತ್ತಿರುವ ಪುಣ್ಯಾತ್ಮರಿಗೆ ಇದು ಪ್ರಾಪ್ತವಾಗುವುದು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಕೀರ್ತಿಯನ್ನುಳಿಸತಕ್ಕ ಕಾರ್ಯಗಳನ್ನೇ ಮನುಷ್ಯನು ಮಾಡಬೇಕು

ಶ್ರೀ ಲಕ್ಷ್ಮಿಯು, ಐಶ್ವರ್ಯ, ಧನಕ್ಕೆ ಅಧಿದೇವತೆ ಪೂರ್ವ ಪುಣ್ಯದಿಂದ ಮನುಷ್ಯರಿಗೆ ಲಕ್ಷ್ಮಿಯು ಒಲಿಯುತ್ತಾಳೆ ಲಕ್ಷ್ಮಿಯು ವಾಸಿಸುವ ಸ್ಥಳದಲ್ಲಿ ಲಕ್ಷ್ಮೀಪತಿಯು ವಾಸಮಾಡುತ್ತಾನೆ ಪೂರ್ವ ಪುಣ್ಯದ ಫಲವಾಗಿ ಲಭಿಸಿದ ಲಕ್ಷ್ಮಿಯನ್ನು ಪುಣ್ಯ ಕಾರ್ಯಗಳಿಗಾಗಿಯೇ ವಿನಿಯೋಗಿಸದೆ-ದುರುಪಯೋಗ ಮಾಡಿದರೆ ಅವಳು ಸಮಯ ನೋಡಿ ಕಾಲಿನಿಂದೊದೆದು ಅವನನ್ನು ತ್ಯಜಿಸುವಳು ವಾಕ್ ಅಥವಾ ಸರಸ್ವತಿಯು-ವಿದ್ಯೆಗೆ ಅಧಿದೇವತೆಯು ವಿದ್ಯೆ ಬುದ್ಧಿ, ಜ್ಞಾನಗಳು ಸರಸ್ವತಿಯ ಅನುಗ್ರಹದಿಂದ ಒದಗುತ್ತವೆ ಆದುದರಿಂದ ಈ ಶ್ರೀ, ವಾಕ್, ಎಂಬ ಶಕ್ತಿಗಳೆರಡೂ ಪರಮಾತ್ಮನ ವಿಭೂತಿಗಳೇ

ಸ್ಮೃತಿ -ಸ್ಮರಣಶಕ್ತಿ ಹಿಂದಿನವನ್ನು-ಹಿಂದೆ ತಿಳಿದುದನ್ನು ಸಮಯದಲ್ಲಿ ಜ್ಞಾಪಿಸಿಕೊಂಡು ಉಪಯೋಗಿಸುವ ಶಕ್ತಿಯು ಇದು ಅತಿ ಪ್ರಬಲವಾದ ಶಕ್ತಿಯು

ವಿದ್ಯಾವಂತರಾದ ಪಂಡಿತರು ಇದರ ಅನುಗ್ರಹವನ್ನು ಪಡೆಯದಿದ್ದರೆ ಅವರು ಶಾಸ್ತ್ರಾರ್ಥದಲ್ಲಿ ಗೆಲ್ಲುವುದು ಅಸಾಧ್ಯ-ನ್ಯಾಯ ಶಾಸ್ತ್ರದಲ್ಲಿ, ಬುದ್ಧಿಯನ್ನು ಸ್ಮೃತಿ, ಅನುಭೂತಿ ಎಂದು ಎರಡು ಭಾಗವಾಗಿ ವಿಂಗಡಿಸಿದ್ದಾರೆ

ಮೇಧಾ–ಧಾರಣಾಶಕ್ತಿಯುಳ್ಳ ಬುದ್ಧಿಯು ಮೇಧಾ ಎನ್ನಲ್ಪಡುವುದು

ಧೃತಿ ಕ್ಷಮಾ ಈ ಎರಡು ಗುಣಗಳ ವರ್ಣನೆಯು ಈ ಅಧ್ಯಾಯದ ನಾಲ್ಕು ಮತ್ತು ಐದನೆಯ ಶ್ಲೋಕಗಳ ಅನುವಾದ ದಲ್ಲಿ ವಿವರವಾಗಿ ಬಂದಿದೆ–

ಈ ಏಳು ಗುಣಗಳು ಯಾರಲ್ಲಿ ವಾಸಮಾಡುವವೋ–ಅವರು ದೇವ ಸದೃಶರಾಗುತ್ತಾರೆ ಇವು ಅಮೃತ ಅಲೌಕಿಕಶಕ್ತಿ ಗಳಾದುದ ರಿಂದ ಪರಮಾತ್ಮನ ವಿಭೂತಿಗಳೆಂದ ಎಣಿಸಲ್ಪಟ್ಟಿವೆ (34)

ಗಾಯನಮಾಡಲು ಯೋಗ್ಯವಾದ ಶ್ರುತಿಗಳಲ್ಲಿ ಬೃಹ ತ್ಸಾಮವೂ, ಛಂದಸ್ಸುಗಳಲ್ಲಿ (*)ಗಾಯತ್ರಿಯೂ ಮಾಸಗಳಲ್ಲಿ ಮಾರ್ಗಶೀರ್ಷವೂ ಋತುಗಳಲ್ಲಿ ವಸಂತವೂ ನಾನೇ ಆಗಿದ್ದೇನೆ

ಛಂದಸ್ಸುಗಳಲ್ಲಿ ಗಾಯತ್ರಿಯು ನಾನು

---

(*) ಗಾಯತ್ರಿಯ ಮಹಿಮೆಯು ಅಪಾರವಾದುದು ಅದಕ್ಕೆ ಈ ಕೆಳಗಿನ ವಚನಗಳನ್ನು ಉದ್ಧರಿಸುತ್ತೇವೆ

"ಗಾಯತ್ರೀಂ ಛಂದಸಾಂ ಮಾತಾ" (ನಾರಾಯಣೋಪನಿಷತ್ 34)

ಗಾಯತ್ರಿಯು ವೇದಗಳಿಗೆ ತಾಯಿಯು

"ಸರ್ವವೇದ ಸಾರಭೂತಾ ಗಾಯತ್ರ್ಯಾಸ್ತು ಸಮರ್ಚನಾ ।

ಬ್ರಹ್ಮಾದಯೋಽಪಿ ಸಂಧ್ಯಾಯಾಂ ತಾಂ ಧ್ಯಾಯನ್ತಿ ಜಪಂತಿ ಚ ॥

[ದೇವೀ ಭಾ । 11–16–15]

ಗಾಯತ್ರಿಯ ಉಪಾಸನೆಯು ಸಮಸ್ತ ವೇದಗಳ ಸಾರಭೂತವಾದುದು ಬ್ರಹ್ಮಾದಿ ದೇವತೆಗಳು ಸಂಧ್ಯಾಕಾಲದಲ್ಲಿ ಗಾಯತ್ರಿಯನ್ನು ಉಪಾಸನೆ ಮಾಡುತ್ತಾರೆ

"ಅಭೀಷ್ಟಲೋಕಮಾಪ್ನೋತಿ ಪ್ರಾಪ್ನುಯಾತ್ ಕಾಮಮೀಪ್ಸಿತಂ,

"ಗಾಯತ್ರೀ ವೇದಜನನೀ ಗಾಯತ್ರೀ ಪಾಪನಾಶನಿ ।"

ಗಾಯತ್ರ್ಯಾಃ ಪರಮಂ ನಾಸ್ತಿ ದಿವಿಚೇಹ ಚ ಪಾವನಂ ।

ಹಸ್ತತ್ರಾಣಪ್ರದಾ ದೇವೀ ಪತತಾಂ ನರಕಾರ್ಣವೇ

[ಶಂಖಸ್ಮೃತಿ 12 24-25]

ಸಾಮವೇದವು ಪರಮಾತ್ಮನ ವಿಭೂತಿ ಎಂದು ಹಿಂದೆಯೇ ಇಪ್ಪತ್ತೆರಡನೆಯ ಶ್ಲೋಕದಲ್ಲಿ ಹೇಳಿದೆ ಸಾಮವೇದದ "ರಥಂತರ" ಮುಂತಾದ ಸಾಮಗಳಲ್ಲಿ ಬೃಹತ್ಸಾಮವು ಮುಖ್ಯವಾದುದು ಆದುದರಿಂದ ಅದನ್ನು ನನ್ನ ಸ್ವರೂಪವೆಂದು ಹೇಳಿದ್ದಾನೆ

ಮಾಸಗಳಲ್ಲಿ ಮಾರ್ಗಶೀರ್ಷವು ನಾನು

ಮಹಾಭಾರತದ ಕಾಲದಲ್ಲಿ ಮಾರ್ಗಶೀರ್ಷ ಮಾಸದಿಂದಲೇ ವರ್ಷವನ್ನು ಪ್ರಾರಂಭಿಸಿ ಎಣಿಕೆಮಾಡುತ್ತಿದ್ದರು ಆದುದರಿಂದ ಇದು ಪ್ರಥಮಮಾಸವು ಈ ಮಾಸದಲ್ಲಿ ಪ್ರಾರಂಭ ಮಾಡುವ ವ್ರತ ಉಪವಾಸಗಳಿಗೆ ಶಾಸ್ತ್ರದಲ್ಲಿ ಮಹತ್ತಾದ ಫಲವನ್ನು ಹೇಳುತ್ತಾರೆ ಹೊಸ ಅನ್ನದ (ಯಜ್ಞದ) ಸೃಷ್ಟಿಯು ಈ ಮಾಸದಲ್ಲಿಯೇ

---

[ಗಾಯತ್ರಿಯನ್ನು ಉಪಾಸನೆ ಮಾಡುವ ದ್ವಿಜನು] ತನ್ನ ಅಭೀಷ್ಟ ಲೋಕವನ್ನು ಹೊಂದುತ್ತಾನೆ ಮನೋವಾಂಛಿತ ಭೋಗವನ್ನು ಪಡೆಯುತ್ತಾನೆ ಗಾಯತ್ರಿಯು ಸಮಸ್ತ ವೇದಗಳಿಗೂ ಮಾತೃವಾಗಿದ್ದಾಳೆ ಸಂಪೂರ್ಣ ಪಾಪಗಳನ್ನು ನಾಶಪಡಿಸುತ್ತಾಳೆ ಸ್ವರ್ಗಲೋಕದಲ್ಲಿ ಹಾಗೆಯೇ ಭೂಲೋಕದಲ್ಲಿ ಗಾಯತ್ರಿಗಿಂತ ಹೆಚ್ಚಿನದಾದ ಪವಿತ್ರಕಾರೀ ವಸ್ತುವು ಎರಡನೆಯದು ಇಲ್ಲ

ಗಾಯತ್ರೀದೇವಿಯು ನರಕ ಸಮುದ್ರದಲ್ಲಿ ಬೀಳುವವರನ್ನು ಕೈಹಿಡಿದು ಮೇಲಕ್ಕೆತ್ತುತ್ತಾಳೆ

ಗಾಯತ್ರ್ಯಾಸ್ತು ಪರಂ ನಾಸ್ತಿ ಶೋಧನಂ ಪಾಪ ಕರ್ಮಣಾಂ ॥
ಮಹಾವ್ಯಾಹೃತಿ ಸಂಯುಕ್ತಾಂ ಪ್ರಣವೇನಚ ಸಂಜಪೇತ್ ।

[ಸಂವರ್ತಸ್ಮೃತಿ 218]

ನಾಸ್ತಿ ಗಂಗಾಸಮಂ ತೀರ್ಥಂ ನ ದೇವಃ ಕೇಶವಾತ್ ಪರಃ ।
ಗಾಯತ್ರ್ಯಾಸ್ತು ಪರಂ ಜಪ್ಯಂ ನಭೂತಂ ನಭವಿಷ್ಯತಿ ।

(ಬೃಹದ್ಯೋಗಿ ಯಜ್ಞವಲ್ಕ್ಯ 10-10)

ಗಂಗೆಗೆ ಸಮಾನವಾದ ತೀರ್ಥವಿಲ್ಲ ಕೇಶವನಿಗಿಂತ ಇಂದ್ರಿಯಾಧೀಶನಿಗಿಂತ ಹೆಚ್ಚಿನ ದೇವನಿಲ್ಲ ಗಾಯತ್ರಿಗಿಂತ ಹೆಚ್ಚಿನ ಜಪದ ಮಂತ್ರವಿರಲಿಲ್ಲ—ಮುಂದೆ ಇರುವುದಿಲ್ಲ.

ಎಂಬ ವಿಧಾಯಕ ಮಾಡಲ್ಪಟ್ಟಿದ ವಾಲ್ಮೀಕಿ ರಾಮಾಯಣ ದಲ್ಲಿ ಇದನ್ನು ಸಂವತ್ಸರಕ್ಕೆ ಭೂಷಣ ಎಂದು ಹೇಳಿದೆ ಹೀಗೆ ವರ್ಷದ ಇತರ ಮಾಸಗಳಿಗಿಂತ ಮಾರ್ಗಶೀರ್ಷ ಮಾಸಕ್ಕೆ ಹೆಚ್ಚಿನ ಅನೇಕ ಮಹತ್ವವು ಹೇಳಲ್ಪಟ್ಟಿದೆ

"ಋತುಗಳಲ್ಲಿ ವಸಂತಋತುವು ನಾನು"

ವಸಂತವು ಋತುಗಳಲ್ಲಿ ಶ್ರೇಷ್ಠವು ರಾಜನಿದ್ದಂತೆ ಇವ ರಲ್ಲಿ ಜಲವಿಲ್ಲದಿದ್ದರೂ ಸಮಸ್ತ ವನಸ್ಪತಿಗಳೂ ಹಸುರು ಚಿಗುರಿನಿಂದ ಕಾಣುತ್ತವೆ ಇದರಲ್ಲಿ ಹೆಚ್ಚು ಉಷ್ಣವೂ, ಶೀತವೂ ಇರುವುದಿಲ್ಲ ಆಹ್ಲಾದ ಕರವಾಗುತ್ತದೆ ಈ ಋತುವು ಸಮಸ್ತ ಪ್ರಾಣಿಗಳಿಗೂ ಆನಂದವನ್ನು ಕೂಡುತ್ತದೆ ಆದುದರಿಂದಿದು ಭಗವದ್ವಿಭೂತಿಯು.

(35)

‡)ಮೋಸಗಾರರಲ್ಲಿ ದ್ಯೂತವು (ಜೂಜು) ತೇಜಸ್ವಿಗಳಲ್ಲಿರುವ

---

†) ಮಹಾಭಾರತ ಅನುಶಾಸನ 106–109

ಶುಕ್ಲೇ ಮಾರ್ಗಶಿರೇ ಪಕ್ಷೇ ಯೋಷಿದ್ಭರ್ತುರನುಜ್ಞಯಾ ।
ಆರಭೇತ ವ್ರತಮಿದಂ ಸಾರ್ವಕಾಮಿಕ ಮಾದಿತಃ ॥

ಮೊಟ್ಟಮೊದಲು ಮಾರ್ಗಶಿರ ಶುಕ್ಲಪಕ್ಷದಲ್ಲಿ ಸ್ತ್ರೀಯು ತನ್ನಪತಿಯ ಅನುಜ್ಞೆ ಯಿಂದ ಸಮಸ್ತ ಕಾಮನೆಗಳನ್ನೂ ಕೊಡುವ ಈ ಪುಂಸವನ ವ್ರತವನ್ನು ಆರಂಭ ಮಾಡಬೇಕು

‡) ದ್ಯೂತದಂತಹ ಮೋಸವಿಲ್ಲ ವೆಂಬುದು ಮಹಾಭಾರತ ದಿಂದಲೇ ತಿಳಿಯ ಬರುತ್ತದೆ. ಮಹಾಭಾರತದ ರಗಳೆಗಳಿಗೆಲ್ಲಾ ದ್ಯೂತವೇ ಮೂಲವಲ್ಲವೆ ? ಇದ ಲ್ಲದೆ ಬೇರೆ ಮೋಸಗಳಿಲ್ಲ ಮನುಷ್ಯನು ಅಜ್ಞಾನದಿಂದ ತಿಳಿಯದೆ ಮೋಸಕ್ಕೆ ಸಿಕ್ಕ ಬಹುದು ಈ ಜೂಜಿನಲ್ಲಿ ನೋಡ ನೋಡ ತ್ತಿದ್ದಂತೆಯೇ ಮೋಸಕ್ಕೆ ಸಿಕ್ಕಿಬೀಳು ತ್ತೇವೆ ತಿಳಿದೂ ತಿಳಿದೂ ಸ್ವೇಚ್ಛೆಯಿಂದಲೇ ಮೋಸಕ್ಕೆ ವಶರಾಗುತ್ತೇವೆ ಸರ್ವಸ್ವವನ್ನೂ ಒತ್ತೆ ಇಟ್ಟು ಆಡುವಷ್ಟು ನಿರ್ಧಾರಕ್ಕೆ ಬರುತ್ತೇವೆ ಧರ್ಮರಾಯನು ಮೋಸವೆಂಬ ತಿಳಿದೂ ಸಹಾ ತನ್ನ ಸರ್ವಸ್ವವನ್ನೂ ರಾಜ್ಯ, ಕೋಶ ತಮ್ಮಂದಿರು

ತೇಜಸ್ಸೂ ಜಯಶಾಲಿಗಳಲ್ಲಿನ ವಿಜಯವೂ ನಿರ್ಣಾಯಕಾರರ ನಿಶ್ಚಯಾತ್ಮ ಬುದ್ಧಿಯೂ ಸಾತ್ವಿಕರಲ್ಲಿನ ಸತ್ವವೂ ನಾನೇ

ಜೂಜು ಬಲುಕೆಟ್ಟುದು ಅದಕಿಂತ ಹೆಚ್ಚಿನ ಮೋಸವಿಲ್ಲ ಶಾಸ್ತ್ರಗಳಲ್ಲಿ ಇದು ಕಟುವಾಗಿ ನಿಷೇಧಿಸಲ್ಪಟ್ಟಿದೆ

ತೇಜಸ್ಸು ಅಥವಾ ಪ್ರಭಾವ ವಿಜಯ, ನಿಶ್ಚಯ, ಸಾತ್ವಿಕ ಭಾವ, ಈ ನಾಲ್ಕು ಗುಣಗಳೂ ಪರಮಾತ್ಮ ಪ್ರಾಪ್ತಿಗೆ ಬಹಳ ಸಹಾಯಕಗಳಾಗಿವೆ ಆದುದರಿಂದಿವುಗಳನ್ನು ತನ್ನ ಸ್ವರೂಪ ವೆಂದು ಪರಮಾತ್ಮನು ಹೇಳಿದ್ದಾನೆ (೩೬)

ವೃಷ್ಣಿಗಳಲ್ಲಿ ವಾಸುದೇವನು, ಪಾಂಡವರಲ್ಲಿ ಧನಂಜಯನೂ ಮುನಿಗಳಲ್ಲಿ ವ್ಯಾಸನು, ಕವಿಗಳಲ್ಲಿ ಶುಕ್ರಾಚಾರ್ಯನು, ದಮನ ಮಾಡುವರಲ್ಲಿ ದಂಡವು ಅಥವಾ ದಮನ ಶಕ್ತಿಯು ಯುದ್ಧ ವಿಜಯಿಗಳಲ್ಲಿ ನೀತಿಯು ರಹಸ್ಯಗಳಲ್ಲಿ ಮೌನವು, ಜ್ಞಾನಿಗಳಲ್ಲಿ ತತ್ವಜ್ಞಾನವೂ ನಾನೇ

ವೃಷ್ಣಿವಂಶದಲ್ಲಿ ವಾಸುದೇವನಾದ, ನಿನ್ನ [illegible] ಸಖ ನಾದ ಶ್ರೀ ಕೃಷ್ಣನಾದ ನಾನೂ ಪಾಂಡವರಲ್ಲಿ ಧನಂಜಯನಾದ ನೀನೂ ನನ್ನ ವಿಭೂತಿಗಳೇ ಜನ್ಮರಹಿತನಾದ, ಅವಿನಾಶಿಯಾದ, ಸರ್ವಭೂತ ಮಹೇಶ್ವರನಾದ ನಾನು ಲೋಕಾನುಗ್ರಹಕ್ಕಾಗಿ ವೃಷ್ಣಿ ವಂಶದಲ್ಲಿ ವಸುದೇವನ ಮಗನಾಗಿ ಅವತಾರ ಮಾಡಿದ್ದೇನೆ ಪಾಂಡವರಾದ ನಿಮ್ಮಲ್ಲಿ ಹಿರಿಯನಾದ ಧರ್ಮರಾಯನು ಎಲ್ಲವಿಷಯ ಗಳಲ್ಲಿಯೂ ಹಿರಿಯನಾಗಿದ್ದರೂ, ನಿನ್ನನ್ನು ಪಾಂಡವರಲ್ಲಿ ನನ್ನ ವಿಭೂತಿಯೆಂದು ಹೇಳುವುದಕ್ಕೆ ಕಾರಣವು ನೀನು ನನ್ನ ನರ ನಾರಾಯಣಾವತಾರದಲ್ಲಿನ ನರಋಷಿಯು, ಈಗ ನನ್ನ ಸಖನಾಗಿ

ತಾತ್ಪರ್ಯ ಧೂಡತಿ ಎಲ್ಲರನ್ನೂ ಒತ್ತೆ ಇಟ್ಟದ್ದರಿಂದಲ್ಲವೆ ಮಹಾ ಅನರ್ಥ ಪಾಪವ

ನನ್ನ ಜೊತೆಯಲ್ಲಿದ್ದೀಯೆ ಅಲ್ಲದೆ ನೀನು ನನ್ನ ಪರಮಪ್ರಿಯ ಭಕ್ತನಾಗಿ ಸಖನಾಗಿ ಅನನ್ಯ ಪ್ರೇಮಿಯಾಗಿದ್ದೀಯೆ

ದಂಡ ಅಥವಾ ದಮನಶಕ್ತಿಯು ಅಧರ್ಮಾಚರಣೆ ಮಾಡುವ ದುಷ್ಟರನ್ನು ಶಿಕ್ಷಿಸಿ ಹದ್ದಿನಲ್ಲಿಡುವುದು ಮನುಷ್ಯನ ಮನಸ್ಸೂ ಮತ್ತೆ ಇಂದ್ರಿಯಗಳೂಸಹಾ ದಮನ-ಶಕ್ತಿಯಿಂದ ಸ್ವಾಧೀನಕ್ಕೆ ತರಲ್ಪಟ್ಟು ಪರಮಾತ್ಮ ಪ್ರಾಪ್ತಿಗೆ ಸಹಾಯಕ ವಾಗುವುವು

(38)

ದಮನ ಶಕ್ತಿಯಿಂದಲೇ ಸಮಸ್ತ ಪ್ರಾಣಿಗಳೂ ಕರ್ತವ್ಯ ಗಳಲ್ಲಿ ನಿರತರಾಗುವರು ದೇವ, ರಾಜ, ಅಧಿಕಾರಿಗಳಲ್ಲಿ ಕಾಣ ಬರುವ ದಂಡಶಕ್ತಿ-ದಮನಶಕ್ತಿಯಿಂದ ಕರ್ತವ್ಯ ವಿಮುಖರಾದ ವರಿಗೆ ಶಿಕ್ಷೆಯೂ, ಕರ್ತವ್ಯ ಪರಾಯಣರಿಗೆ ರಕ್ಷೆಯೂ ಕೊಡಲ್ಪ ಡುವುದಾದುದರಿಂದ ಇದನ್ನು ತನ್ನ ವಿಭೂತಿಯೆಂದು ಕರೆದಿದ್ದಾನೆ

ದಂಡಶಕ್ತಿಯು ಜಗತ್ತನ್ನುವಶದಲ್ಲಿಟ್ಟುಕೊಳ್ಳುವ ಪರಮಾತ್ಮ ವಿಭೂತಿ ರಾಜನೀತಿಯಲ್ಲಿ ದಂಡಶಕ್ತಿಗೆ ಅತ್ಯಂತ ಹೆಚ್ಚಿನ ಪ್ರಾಧಾನ್ಯವಿದೆ ಅದನ್ನು ಪರಮಾತ್ಮ ಸ್ವರೂಪವೆಂದು ಹೇಳಿದೆ

ಸತ್ವರಜಸ್ತಮೋಗುಣಗಳ ಈ ಜಗತ್ತಿನಲ್ಲಿ-ತಮೋಗುಣ ಯುಕ್ತದುಷ್ಟರನ್ನು ಸ್ವಾಧೀನ ಮಾಡಿಕೊಳ್ಳಲು ರಾಜದಂಡವಿಲ್ಲ ದಿದ್ದರೆ ಜಗತ್ತು ಅನಾಯಕ ವಾಗುವುದು ದುಷ್ಟರು ಪ್ರಬಲರಾಗು ವರು ವೃದ್ಧ, ಸ್ತ್ರೀ, ಅನಾಥ, ಸಾಧುಗಳಿಗೆ ಪೀಡೆಯಾಗುವುದು ಆದುದರಿಂದ ಆ ದುಷ್ಟಶಕ್ತಿಗಳನ್ನು ಸ್ವಾಧೀನಕ್ಕೆತರಲು, ಸಂಪೂರ್ಣ ರಜೋಗುಣ ಯುಕ್ತವಾದ ದಂಡಶಕ್ತಿಯೊಂದೇ ಅವಶ್ಯಕ ಅದು

ಸಿರ್ಥ್ಯೆಯದಿಂದ ದುಷ್ಟಶಕ್ತಿಗಳನ್ನು ಸ್ವಾಧೀನಕ್ಕೆ ತರುವುದು ಆದುದ ರಿಂದ ಪ್ರಜಾಪಾಲನೆಯಲ್ಲಿ ದಂಡಶಕ್ತಿಗೆ ಅತ್ಯಂತ ಪ್ರಾಮುಖ್ಯ ವಾದ ಸ್ಥಾನವಿದೆ

ಈ ದಂಡಶಕ್ತಿಯು ಬಹಳ ಪ್ರಬಲವಾದುದ ಇದರಲ್ಲಿ ಮೂರು ಭೇದಗಳಿವೆ. —

1) ವಧೆ 2) ಅರ್ಥಸಂಗ್ರಹ 3) ಬಂಧನ ತಾಡನಾದಿಗಳು ವಧೆಯಿಂದ ಗುರುತರಪಾಪ-ಸಮಾಜ ದ್ರೋಹಗಳನ್ನು-ಕೊಲೆ ಅತ್ಯಾ ಚಾರಾದಿಗಳನ್ನು ಮಾಡುವವರನ್ನು ಎಲ್ಲರೂ ಕಾಣುವಂತೆ ಮರಣ ದಂಡನೆಯ ಮೂಲಕ ಶಿಕ್ಷಿಸುವುದು

2) ಅರ್ಥಸಂಗ್ರಹ=ದುರಾಚಾರದಿಂದ-ಮೋಸ ಕಪಟಗಳಿಂದ ಧನಸಂಗ್ರಹ ಮಾಡಿರುವವರನ್ನು-ಲಂಚ ಮುಂತಾದ ದುರ್ವ್ಯಾ ಪಾರಗಳಿಂದ ಹಣವನ್ನು ಕೂಡಿಹಾಕಿರುವ ಅಧಿಕಾರಿಗಳನ್ನ ಶಿಕ್ಷಿ ಸಲು ಅಂಥವರಿಂದ ಅವರ ಪಾಪದಪರಿಮಾಣಕ್ಕೆ ಮೀರಿ ದಂಡ- ಅಥವಾ ಜುಲ್ಮಾನೆ ಹಾಕುವುದರಿಂದ ಹದ್ದಿಗೆ ತರಬೇಕು ಇಲ್ಲ ದಿದ್ದರೆ ಅವರಿಗೆ ತಮ್ಮ ತಪ್ಪಿನ ಅರಿವಾಗುವುದಿಲ್ಲ

3) ಬಂಧನ ತಾಡನಾದಿಗಳು=ಕಾರಾಗೃಹಕ್ಕೆ ಹಾಕುವುದು ಅಥವಾ ದಂಡದಿಂದ-ಬೆತ್ತದಿಂದ-ಕೋಲಿನಿಂದ ಛಡಿಏಟುಕೊಟ್ಟು ದುಷ್ಟರಿಗೆ-ಕಾಯದಂಡವನ್ನು ಮಾಡಿ-ಭಯದಲ್ಲಿಡುವುದು

ಇಂದ್ರಿಯನಿಗ್ರಹ ಮಾಡಿರುವ-ಮಾಡಲು ಪ್ರಯತ್ನಿಸುವ ಯತಿ-ಅಥವಾ ಯೋಗಿಯು ತ್ರಿದಂಡ ಸಂನ್ಯಾಸಿ ಬೆತ್ತದ ಅಥವಾ

ಬಿದಿರಿನ ಕೋಲಿನಿಂದ ತ್ರಿದಂಡ ಸಂನ್ಯಾಸಿಯಾಗುವುದಿಲ್ಲ ಕಾಯ ದಂಡ, ವಾಕ್ ದಂಡ, ಮನೋ ದಂಡಗಳಿಂದ ಮಾತ್ರ ತ್ರಿದಂಡಿ ಯಾಗುತ್ತಾನೆ ಕಾಯದಂಡವೆಂದರೆ ಉಗ್ರವಾದ ಕಟ್ಟುನಿಟ್ಟಾದ ನಿಯಮಗಳಿಂದ ದೇಹವನ್ನು ಹದ್ದಿನಲ್ಲಿಡುವುದು. ವಾಕ್ ದಂಡ ವೆಂದರೆ ಅನವಶ್ಯಕವಾದ ಮಾತುಗಳಿಗೆ, ವ್ಯವಹಾರಗಳಿಗೆ ಅವಕಾಶ ವಾಗದಂತೆ, ವಾಙ್ನಿಯಮ ಮೌನಗಳಿಂದ ತನ್ನ ಬಾಯಿಯಿಂದ ಹೊರಡುವ ಮಾತುಗಳನ್ನು ಹದ್ದಿನಲ್ಲಿಡುವುದು ಮನೋದಂಡ ವೆಂದರೆ-ಮನಸ್ಸಿನಲ್ಲಿ ಅನ್ಯಚಿಂತನೆಗಳಿಗೆ ಅವಕಾಶವಿಲ್ಲದಂತೆ ಸದಾ ಸರ್ವದಾ ಭಗವಚ್ಚಿಂತನೆಯನ್ನೇ ವೃದ್ಧಿಪಡಿಸುವುದು—

"ಜ್ಞಾನಿಗಳಲ್ಲಿರುವ ಜ್ಞಾನವು ನಾನು

ಜ್ಞಾನವು ಸಾಕ್ಷಾತ್ ಪರಮಾತ್ಮ ಸ್ವರೂಪವು ಅದು18 ನೆಯ ಅಧ್ಯಾಯದಲ್ಲಿ ಚೆನ್ನಾಗಿ ವರ್ಣನೆ ಮಾಡಲ್ಪಟ್ಟಿದೆ (ಶ್ಲೋಕ ೩೮)

"ಸಮಸ್ತ ಭೂತ-ಪ್ರಾಣಿಗಳ ಉತ್ಪತ್ತಿಗೆ ಕಾರಣವಾದ ಬೀಜ ಸ್ವರೂಪವಾಗಿದ್ದೇನೆ ಸಮಸ್ತ ಚರಾಚರ ಜಗತ್ತಿನಲ್ಲಿ ನಾನಿಲ್ಲದ ವಸ್ತುವೇ ಇಲ್ಲ' ಎನ್ನೈ ಪರಂತಪನೆ-ಶತ್ರು ನಾಶಕರಾದ ಅರ್ಜುನನೇ ನನ್ನ ದಿವ್ಯವಾದ ವಿಭೂತಿಗಳಿಗೆ ಕೊನೆಯಿಲ್ಲ ನನ್ನ ಈ ವಿಭೂತಿ ಗಳ ವರ್ಣನೆಯನ್ನು ನಿನಗಾಗಿ ಹೇಳಿದ್ದೇನೆ (39-40)

ಹದಿನೆಂಟನೆಯ ಶ್ಲೋಕದಲ್ಲಿ ಪರಮಾತ್ಮನ ವಿಭೂತಿಯನ್ನೂ ಯೋಗವನ್ನೂ ವರ್ಣಿಸ ಬೇಕೆಂದು ಮಾಡಿದ ಪ್ರಾರ್ಥನೆಯಂತೆ ಇದುವರೆಗೂ ವಿಭೂತಿ-ಪ್ರಭಾವವನ್ನು ಹೇಳಿದುದಾಯಿತು ಇನ್ನು ಮುಂದಿನ ಎರಡು ಶ್ಲೋಕಗಳಲ್ಲಿ ಯೋಗವನ್ನು ವರ್ಣಿಸುತ್ತಾನೆ-

ಪರಮಾತ್ಮ ಸ್ವರೂಪವನ್ನು-ವೇದಾದಿ ಶಾಸ್ತ್ರಗಳನ್ನು ಮನನ ಮಾಡುವವನು ಮುನಿಯು ಭಗವಾನ್ ವೇದವ್ಯಾಸರು ಸಮಸ್ತ ವೇದಗಳನ್ನೂ ಚೆನ್ನಾಗಿ ಮನನ ಮಾಡಿ ಋಗ್ಯಜುಸ್ಸಾಮಾಥರ್ವ-ಣ ಗಳನ್ನಾಗಿ ವಿಂಗಡಿಸಿ ಮಹಾಭಾರತ ಪುರಾಣಾದಿಗಳನ್ನು ರಚಿಸಿ ಪರಮಾತ್ಮನ ಅಂಶಾವತಾರರೆಂದು ಪ್ರಸಿದ್ಧರಾಗಿದ್ದಾರೆ

ಪಂಡಿತನಾಗಿ ಬುದ್ಧಿವಂತನಾದವನನ್ನು ಕವಿಯೆಂದು ಕರೆ ಯುತ್ತಾರೆ ಶುಕ್ರಾಚಾರ್ಯರು ಭಾರ್ಗವರ ಅಧಿಪತಿಯು ಸಮಸ್ತ ವಿದ್ಯಾವಿಶಾರದರು ಸಂಜೀವಿನೀ ವಿದ್ಯೆಯನ್ನು ತಿಳಿದವರು ಕವಿ ಗಳಲ್ಲಿ ಪ್ರಧಾನರು ಆದುದರಿಂದಿವರನ್ನು ಕವಿ ಶ್ರೇಷ್ಠರೆಂದು ವರ್ಣಿಸಿದ್ದಾನೆ ॥ (37)

ನೀತಿ ಎಂಬ ಪದವು ಇಲ್ಲಿ ನ್ಯಾಯಕ್ಕೆ ಪ್ರತಿಯಾಗಿ ಸಂಬೋ ಧಿಸಲ್ಪಡುತ್ತದೆ ನ್ಯಾಯದಿಂದಲೇ ಮನುಷ್ಯನಿಗೆ ನಿಜವಾದ ವಿಜ ಯವು ಪ್ರಾಪ್ತವಾಗುತ್ತದೆ. ಯಾವ ರಾಜ್ಯದಲ್ಲಿ ನೀತಿಯು ಇರು ವುದಿಲ್ಲವೋ, ಅನೀತಿಯ ವ್ಯವಹಾರವು ಸ್ವಚ್ಛಂದವಾಗಿ ನಡೆಯು ವುದೋ ಆ ರಾಜ್ಯವು ಶೀಘ್ರವಾಗಿ ನಾಶವಾಗುವುದು ಆದುದ ರಿಂದ-ನೀತಿ ಅಥವಾ ನ್ಯಾಯವು ವಿಜಯಕ್ಕೆ ಪ್ರಧಾನವಾದ ಉಪಾ ಯವು

ರಹಸ್ಯ ಅಥವಾ ಗುಟ್ಟಾಗಿಡಲ್ಪಡ ಬೇಕಾದ ವಿಷಯಗಳು ಎಲ್ಲಕ್ಕಿಂತಲೂ ಹೆಚ್ಚಾಗಿ ಮೌನದಿಂದ ರಕ್ಷಿಸಲ್ಪಡುವುವು ಮಾತ ನಾಡದಿರುವುದನ್ನು ಅಭ್ಯಾಸಮಾಡಿದರೆ ಗುಟ್ಟು ರಟ್ಟಾಗುವ ಅವ ಕಾಶವೇಇರುವುದಿಲ್ಲ

ಜಗತ್ತಿನಲ್ಲಿ ಯಾವ ಯಾವ ವಸ್ತುವು ವಿಭೂತಿ-ಪ್ರಭಾವ ಅಥವಾ ಐಶ್ವರ್ಯಯುಕ್ತ ವಾದುದೋ, ಕಾಂತಿಯುಕ್ತ ಮತ್ತು ಶಕ್ತಿ ಯುಕ್ತವಾದುವೋ, ಅದೆಲ್ಲವೂ ನನ್ನ ತೇಜಸ್ಸಿನ "ಅಂಶದಿಂದ ಹುಟ್ಟಿರುವುದೆಂದೇ ತಿಳಿ (40)

ಸಾಧಾರಣ ವಿಭೂತಿಗಳ ಮಾತೇನು ? ದಿವ್ಯ ವಿಭೂತಿ ಗಳಿಗೂ ಕೊನೆಮೊದಲಿಲ್ಲ ನೀರಿನ ಮತ್ತು ಭೂಮಿಯ ಪರಮಾಣು ಗಳನ್ನು ಎಣಿಸುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಪರ ಮಾತ್ಮನ ವಿಭೂತಿಗಳನ್ನ ಎಣಿಸಿ ಹೇಳಲು ಸಾಧ್ಯವಿಲ್ಲ ಅದ ನ್ನಾರೂ ತಿಳಿಯಲೂ ಸಾಧ್ಯವಿಲ್ಲ ವರ್ಣಿಸಲೂ ಸಾಧ್ಯವಿಲ್ಲ ಅನಂತ ಬ್ರಹ್ಮಾಂಡದಲ್ಲಿ ದೇವನ ವಿಭೂತಿಗಳು ಅನಂತವಾಗಿವೆ ಆದುವರಿಂದ ಸಂಕ್ಷೇಪವಾಗಿ-ಮುಖ್ಯ ಮುಖ್ಯವಾದುದನ್ನು ಮಾತ್ರ ಗುರ್ತಿಗೆ ತಿಳಿಸಿದಂತಾಯಿತು —

ಈ ವಿಭೂತಿಗಳ ವರ್ಣನೆಯು ಇಪ್ಪತ್ತನೆಯ ಶ್ಲೋಕದಿಂದ ಪ್ರಾರಂಭವಾಗಿ ಈ ನಲವತ್ತನೆಯ ಶ್ಲೋಕಕ್ಕೆ ಕೊನೆಮುಟ್ಟುವುದು

ಜಗತ್ತಿನಲ್ಲಿ, ಉತ್ತಮ, ಮಧ್ಯಮ, ನೀಚ, (ಕೀಳು) ಎಂಬ ಮೂರು ರೂಪವಾದ ಯಾವ ಯಾವ ಜೀವ ಅಥವಾ ಪದಾರ್ಥ ಗಳಿವೆಯೋ ಅವೆಲ್ಲದರಲ್ಲಿಯೂ ದೇವನು ವ್ಯಾಪಿಸಿದ್ದಾನೆ ಅವನ ಶಕ್ತಿಯಿಂದಲೇ ಅವುಗಳು ಬದುಕಿವೆ-ಹೀಗೆ ಸಾತ್ವಿಕ ರಾಜಸ ತಾಮಸ ಜೀವ-ಅಥವಾ ಪದಾರ್ಥಗಳಲ್ಲಿ ಯಾವ ಯಾವದು ವಿಶೇಷ ಗುಣ ವಿಶೇಷ ಪ್ರಭಾವ ಅಥವಾ ವಿಶೇಷ ಚಮತ್ಕಾರದಿಂದೊಡ ಗೂಡಿರುವುದೋ ಅದೆಲ್ಲದರಲ್ಲಿಯೂ ಪರಮಾತ್ಮನ ವಿಶೇಷ ಸತ್ವ

ಅಥವಾ ಶಕ್ತಿಯು ಚೆನ್ನಾಗಿ ವಿಕಾಸವಾಗಿದೆ

ಈ ದೃಷ್ಟಿಯಿಂದ ಪರಮಾತ್ಮನು ದೇವತೆಗಳಲ್ಲಿ, ದೈತ್ಯರಲ್ಲಿ, ಮನುಷ್ಯ, ಪಶು, ಪಕ್ಷಿ, ಸರ್ಪ ಮುಂತಾದ ಚೇತನ ವಸ್ತುಗಳಲ್ಲಿ, ಹಾಗೆಯೇ, ವಜ್ರ ಇಂದ್ರಿಯ, ಮನಸ್ಸು, ಸಮುದ್ರ ಮುಂತಾದ ಜಡವಸ್ತುಗಳಲ್ಲಿ ಜಯ ನಿಶ್ಚಯ, ತೇಜಸ್ಸು, ನೀತಿ, ಜ್ಞಾನ, ಮುಂತಾದ ಭಾವಗಳಲ್ಲಿ ತನ್ನ ವಿಭೂತಿಯನ್ನ ವರ್ಣಿಸಿದ್ದಾನೆ— ಸ್ವಲ್ಪದರಲ್ಲಿಯೇ ಎಲ್ಲವುಗಳ ವರ್ಣನೆಯೂ ಬರಬೇಕೆಂದೇ ಅವುಗಳಲ್ಲಿ ಮುಖ್ಯ ಮುಖ್ಯವಾದುವುಗಳ ಹೆಸರನ್ನು ಸೂಚಿಸಿದ್ದಾನೆ 1) ಕ್ಷತ್ರಿಯ ವಿಭೂತಿಗಳು ಏಳು 2) ಸ್ತ್ರೀವಿಭೂತಿಯು ಒಂದು

---

1) ರಾಮಃ ಶಸ್ತ್ರಭೃತಾಂ
ವೃಷ್ಣೀನಾಂ ವಾಸುದೇವೋಽಸ್ಮಿ, ಪಾಂಡವಾನಾಂ ಧನಂಜಯಃ
ನರಾಣಾಂ ಚ ನರಾಧಿಪಂ ಸರ್ಪಾಣಾಮಸ್ಮಿ—ವಾಸುಕಿಃ
ಅನಂತಶ್ಚಾಸ್ಮಿ ನಾಗಾನಾಂ ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ

2) ಸ್ತ್ರೀಯರಲ್ಲಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ, ಈ ಏಳೂ ಈಶ್ವರನ ವಿಭೂತಿಗಳು ಈ ಹೆಸರಿನ ಸ್ತ್ರೀಯರು ಪ್ರಖ್ಯಾತರಾಗಿದ್ದಾರೆ ಹಾಗೆಯೇ ಕೀರ್ತಿ, ಮುಂತಾದ ಏಳು ಸ್ತ್ರೀರೂಪೀ ದೈವೀಶಕ್ತಿಗಳು ಅಥವಾ ಅವುಗಳಲ್ಲಿ ಯಾವುದಾದರೊಂದು ಮನುಷ್ಯನಿಗೆ ಒಲಿದರೆ ಅವರ ಜೀವನವು ಸಾರ್ಥಕವಾಗುವುದು

ಕೀರ್ತಿಯು ಮನುಷ್ಯನಿಗೆ ಸಂಪಾದಿಸಲು ಯೋಗ್ಯವಾದ ಆಸ್ತಿ ಯಶಸ್ಸು, ಅಥವಾ ಕೀರ್ತಿಯನ್ನು ಮನುಷ್ಯನು ಬದುಕಿರುವಾಗಲೂ ಸತ್ತನಂತರವೂ ಗಳಿಸಬೇಕು ಬದುಕಿರುವಾಗ ಬರುವ ಖ್ಯಾತಿಯು ಯಶಸ್ಸು, ಸತ್ತನಂತರ ಬರುವ ಖ್ಯಾತಿಯು ಕೀರ್ತಿ—

ಶ್ರೀ-ಲಕ್ಷ್ಮಿ ಐಶ್ವರ್ಯ ಮುಂತಾದ ಭಾಗ್ಯ ಭಾಗ್ಯ ದೇವತೆಯಾದ ಲಕ್ಷ್ಮಿಯು ಪರಮಾತ್ಮನನ್ನು ಕೈಹಿಡಿದಿದ್ದಾಳೆ ಅವಳನ್ನು ಸರಿಯಾಗಿ ಉಪಯೋಗ ಮಾಡಿಕೊಂಡರೆ, ಇಹದಲ್ಲಿಯೂ ಪರದಲ್ಲಿಯೂ ನಮಗೆ ಸುಖವನ್ನು ಕೊಡುವಳು.

1) ಬ್ರಾಹ್ಮಣ ವಿಭೂತಿಗಳು ಆರು 2) ದೇವತೆಗಳಲ್ಲಿ ಹನ್ನೆರಡು 3) ಪಿತೃಗಳಲ್ಲಿ ಒಂದು 4) ಯಕ್ಷರಾಕ್ಷಸರಲ್ಲಿ ಒಂದು 5) ಗಂಧರ್ವರಲ್ಲಿ ಒಂದು

---

ಇಲ್ಲದಿದ್ದರೆ ಪಾಪವನ್ನು ಕೊಟ್ಟು ಕೆಲವು ಕಾಲಾನಂತರ ಕಾಲಿನಿಂದ ಒದ್ದು ಹೊರಟು ಹೋಗುವಳು

ವಾಕ್ ಇದು ಸರಸ್ವತಿಯ ಪ್ರಸಾದ ವ್ಯಾಖ್ಯಾನರಚನೆಯಲ್ಲಿ ವಾಕ್ಯಗಳ ಸ್ಫೂರ್ತಿಯೂ ಕವಿಗಳಲ್ಲಿ ವಚನದ–ರಚನಾ ಶಕ್ತಿಯ ವೈಶಿಷ್ಟ್ಯವೂ ದೈವಾನುಗ್ರಹದಿಂದ ಬರುವ ಸಂಪತ್ತು

ಸ್ಮೃತಿ-ಸ್ಮರಣಶಕ್ತಿ ಹಿಂದಿನ ಕಾಲದ ಅನುಭವವನ್ನು ವರ್ತಮಾನ ಕಾಲಕ್ಕೆ ಸ್ಮರಣೆಗೆ ತರುವ ಜ್ಞಾಪಕಶಕ್ತಿ ಅಥವಾ ಬುದ್ಧಿಶಕ್ತಿ ಇದನ್ನು ಸ್ಮೃತಿ ಅನುಭೂತಿ ಎಂದ ನ್ಯಾಯಶಾಸ್ತ್ರದಲ್ಲಿ ಎರಡು ವಿಭಾಗ ಮಾಡಿದ್ದಾರೆ

ಮೇಧಾ ಧಾರಣಾ ಶಕ್ತಿಯುಳ್ಳ ಬುದ್ಧಿಯು ಮೇಧಾ ಎನ್ನಲ್ಪಡುತ್ತದೆ ಒಂದಾವೃತ್ತಿ ಓದಿದುದನ್ನು ಬಹುಕಾಲ ಮರೆಯದಿರುವ ಎಚ್ಚರಿಕೆಯು ಮೇಧಾ ಶಕ್ತಿ

ಧೃತಿ-ಕ್ಷಮಾ–ಈ ತೆರೆಕೂ ಹಿಂದೆಯೇ ನಾಲ್ಕು ಮತ್ತು ಐದನೆಯ ಶ್ಲೋಕಗಳಲ್ಲಿ ವರ್ಣಿಸಲ್ಪಟ್ಟವೆ

1) ಪುರೋಧಸಾಂ ಚ ಮುಖ್ಯಂ ಮಾಂ, ವಿದ್ಧಿ ಪಾರ್ಥ ಬೃಹಸ್ಪತಿಂ,
ದೇವರ್ಷೀಣಾಂ ಚ ನಾರದಃ ಕವೀನಾಮುಶನಾಃ ಕವಿ,
ಮಹರ್ಷೀಣಾಂ -ಭೃಗು ರಹಂ ಸಿದ್ಧಾನಾಂ ಕಪಿಲೋ ಮುನಿಃ

2) ದೇವಾನಾಮಸ್ಮಿ ವಾಸವಃ–ಧಾತಾಹಂ ವಿಶ್ವತೋ ಮುಖಃ
ಆದಿತ್ಯಾನಾ ಮಹಂ ವಿಷ್ಣುಃ–ಜ್ಯೋತಿಷಾಂ ರವಿರಂಶುಮಾನ್
ರುದ್ರಾಣಾಂ ಶಂಕರ ಶ್ಚಾಸ್ಮಿ ಪವನಃ ಪವತಾಮಸ್ಮಿ
ಮರೀಚಿರ್ಮರುತಾಮಸ್ಮಿ, ವರುಣೋಯಾದಸಾಮಹಂ
ಸೇನಾನೀನಾಮಹಂ ಸ್ಕಂದಃ, ವಸೂನಾಂ ಪಾವಕಶ್ಚಾಸ್ಮಿ
ನಕ್ಷತ್ರಾಣಾ ಮಹಂ ಶಶೀ ಪ್ರಜನಶ್ಚಾಸ್ಮಿ ಕಂದರ್ಪಃ
3) ಪಿತೄಣಾಮರ್ಯಮಾ ಚಾಸ್ಮಿ
4) ವಿತ್ತೇಶೋ ಯಕ್ಷ ರಕ್ಷಸಾಂ
5) ಗಂಧರ್ವಾಣಾಂ ಚಿತ್ರ ರಥಃ

ಗುಣಗಳಲ್ಲಿ 1) ಹತ್ತು 2) ವಿದ್ಯೆಗಳಲ್ಲಿ ಎಂಟು, 3) ಪಶು ಪಕ್ಷಿಗಳಲ್ಲಿ ಆರು 4) ಸ್ಥಾವರಗಳಲ್ಲಿ ಮೂರು

ಜಲಸ್ಥಾನಗಳಲ್ಲಿ 1) ಎರಡು 2) ಇಂದ್ರಿಯಗಳಲ್ಲಿ ಒಂದು 3) ಶಸ್ತ್ರಗಳಲ್ಲಿ ಒಂದು 4) ಜನ್ಮ ಮೃತ್ಯುಗಳಲ್ಲಿ ಮೂರು 5) ಕ್ಷಾಲದಲ್ಲಿ ನಾಲ್ಕು 6) ಬೀಜ, ವಿಸ್ತಾರಗಳಲ್ಲಿ ಮೂರು ಹೀಗೆ ಒಟ್ಟು ಎಪ್ಪತ್ತು ವಿಭೂತಿಗಳು ಬಂದಿವೆ ಇವುಗಳ ಜೊತೆಗೆ ಗೀತೆಯ ಏಳನೆಯ ಅಧ್ಯಾಯದಲ್ಲಿ ಕೆಲವು 7) ವಿಭೂತಿಗಳು ಗುರ್ತಿಸಲ್ಪಟ್ಟಿವೆ ಪೃಥ್ವಿಯಲ್ಲಿನ ಗಂಧಶಕ್ತಿ, ಜಲತತ್ವದಲ್ಲಿ ರಸಶಕ್ತಿ, ಅಗ್ನಿ ತತ್ವದಲ್ಲಿ ಪ್ರಕಾಶ, ಸೂರ್ಯ ಚಂದ್ರರಲ್ಲಿನ

---

1) ಜ್ಞಾನಂ ಜ್ಞಾನವತಾಮಹಂ ವಾದಃ ಪ್ರವದತಾಮಹಂ
ಮೌನಂಚೈವಾಸ್ಮಿಗುಹ್ಯಾನಾಂ ದಂಡೊ ದಮಯ ತಾಮಸ್ಮಿ
ತ ಜಸ್ತೇಜಸ್ವಿನಾಮಹಂ, ಸತ್ತ್ವಂ ಸತ್ತ್ವವತಾವ ಹಂ
ನೀತಿ ರಸ್ಮಿಜಿಗೀಷತಾಂ —ಜಯೋಽಸ್ಮಿ —ವ್ಯವಸಾಯೋಽಸ್ಮಿ
ದ್ಯೂತಂ ಛಲ ತಾವ ಸ್ಮಿ

2) ಅಧ್ಯಾತ್ಮ ವಿದ್ಯಾವಿದ್ಯಾನಾಂ, ಅಕ್ಷರಾಣಾಮಕಾರೋಽಸ್ಮಿ
ಗಿರಾವ ಸ್ಮ್ಯೇಕಮಕ್ಷರಂ ವೇದಾನಾಂ ಸಾಮವೇದೋಽಸ್ಮಿ
ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀಛಂದಸಾಮಹಂ
ದ್ವಂದ್ವಃ ಸಾಮಾಸಿಕಸ್ಯಚ ಯಜ್ಞಾನಾಂ ಜಪಯ ಜ್ಞೋಽಸ್ಮಿ 20

3) ಧೇನೂನಾವ ಸ್ಮಿ ಕಾಮಧುಕ್, ಉಚ್ಚೈಶ್ರವಸಮಶ್ವಾನಾಂ ವಿದ್ಧಿ
ಮಾಮಮೃತೋದ್ಭವಂ, ಐರಾವತಂ ಗಜೇಂದ್ರಾಣಾಂ ಮೃಗಾಣಾಂಚ
ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಂ ಝಷಾಣಾಂ ಮಕರಶ್ಚಾಹಂ

4) ಮೇರುಃ ಶಿಖರಿಣಾಮಹಂ ಸ್ಥಾವರಾಣಾಂಹಿಮಾಲಯಃ
ಅಶ್ವತ್ಥ ಸರ್ವವೃಕ್ಷಾಣಾಂ

7) ಪುಣ್ಯೋ ಗಂಧಃ ಪೃಥಿವ್ಯಾಂ ರಸೋಽಹಮಪ್ಸು ತೇಜಶ್ಚಾಸ್ಮಿವಿಭಾವಸೌ
ಪ್ರಭಾಸ್ಮಿಶಶಿಸೂರ್ಯಯೋಃ ಶಬ್ದ ಖೇ ಪ್ರಣವ ಸರ್ವವೇದೇಷು
ಪೌರುಷಂನೃಷು, ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು

ಪ್ರಭೆ ಆಕಾಶ ತತ್ತ್ವದಲ್ಲಿನ ಶಬ್ದ, ವೇದಗಳಲ್ಲಿ ಓಂಕಾರ, ಮನುಷ್ಯರಲ್ಲಿ ಪೌರುಷ, ಪ್ರಾಣಿಗಳಲ್ಲಿ ಜೀವನ, ತಪಸ್ವಿಗಳಲ್ಲಿ ತಪಸ್ಸು, ‡ಬುದ್ಧಿವಂತರಲ್ಲಿ ಬುದ್ಧಿ, †ತೇಜಸ್ವಿಗಳಲ್ಲಿನ ತೇಜಸ್ಸು, *ಬಲವಂತರಲ್ಲಿ *ಕಾಮಭೋಗ ರಹಿತವಾದ ಬಲ, ಧರ್ಮಕ್ಕೆ ವಿರೋಧವಿಲ್ಲದ ಕಾಮ ‡ಸಮಸ್ತ ಭೂತಗಳಲ್ಲಿನ ಸನಾತನ ಬೀಜ, ಮತ್ತು ಸಮಸ್ತ ಜಗತ್ತಿನಲ್ಲಿ ಕಾಣಬರುವ ಸಾತ್ವಿಕ, ರಾಜಸ, ತಾಮಸ ಭೂತಗಳು ಇವೆಲ್ಲವೂ ಪರಮಾತ್ಮನ ವಿಭೂತಿಗಳೇ ಓಂಕಾರ, ಜೀವನ, ತಪಸ್ಸು, ಕಾಮ, ಬೀಜ, ಈ ಐದೂ ಈ ಹತ್ತನೆಯ ಅಧ್ಯಾಯದಲ್ಲಿಯೂ ಹೇಳಲ್ಪಟ್ಟಿವೆ ಉಳಿದವುಗಳೆಲ್ಲಾ ಹೊಸದೇ.

ಇಲ್ಲಿ ಹೇಳಲ್ಪಟ್ಟಿದು ಮಾತ್ರವೇ ಪರಮಾತ್ಮನ ವಿಭೂತಿಗಳೆಂದು ತಿಳಿಯಬಾರದು ಇವುಗಳು ಕೇವಲ ಗುರ್ತಿಗಾಗಿ ಉದ್ದೇಶತಃ, ಹೇಳಲ್ಪಟ್ಟಿವೆ

---

‡ಬುದ್ಧಿರ್ಬುದ್ಧಿಮತಾಮಸ್ಮಿ †ತೇಜಸ್ತೇಜಸ್ವಿನಾಮಹಂ। *ಬಲಂಬಲವತಾಮಸ್ಮಿ ಕಾಮರಾಗ ವಿವರ್ಜಿತಂ । *ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ।
‡ಬೀಜಂಮಾಂಸರ್ವಭೂತಾನಾಂ ವಿದ್ಧಿ ಪಾರ್ಥಸನಾತನಂ ।

[ಹಿಂದಿನ ಪುಟದ ಎರಡನೇ ಪ್ಯಾರದಲ್ಲಿನ ನಂತರ ಕ್ರಮಸಂಖ್ಯೆಯಂತೆ ಕೆಳಗೆ ಪರಾಗಳನ್ನು, ಪುಟದ ಕೆಳಗಿನ ಕೊನೆಯ 7ನೆಯ ಪರಾವನ್ನು ಓದಿಕೊಳ್ಳಬೇಕು ]

1) ಸರಸಾಮಸ್ಮಿ ಸಾಗರಃ । ಸ್ರೋತಸಾಮಸ್ಮಿ ಜಾಹ್ನವೀ,
2) ಇಂದ್ರಿಯಾಣಾಂ ಮನಶ್ಚಾಸ್ಮಿ
3) ಆಯುಧಾನಾಮಹಂ ವಜ್ರಂ
4) ಉದ್ಭವಶ್ಚಭವಿಷ್ಯತಾಂ । ಮೃತ್ಯುಃ ಸರ್ವಹರಶ್ಚಾಹಂ
ಯಮಃ ಸಂಯಮತಾಮಹಂ
5) ಅಹಮೇವಾಕ್ಷಯಃ ಕಾಲಃ ಕಾಲಃ ಕಲಯತಾಮಹಂ
ಮಾಸಾನಾಂ ಮಾರ್ಗಶೀರ್ಷೋಽಹಂ, ಋತೂನಾಂ ಕುಸುಮಾಕರಃ,
6) ಯಚ್ಚಾಪಿಸರ್ವಭೂತಾನಾಂ ಬೀಜಂ ತದಹಮರ್ಜುನ ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ಭೂತಾನಾಮಸ್ಮಿಚೇತನಾ

ಎಲ್ಲದರಲ್ಲಿಯೂ ಶ್ರೇಷ್ಠವಾದುದು ದೈವೀ ವಿಭೂತಿಯೆಂದಾದ ಮೇಲೆ, ಯಾವ ಯಾವ ವ್ಯಕ್ತಿ ಕ್ರಿಯಾ ಅಥವಾ ಭಾವವು ಮನಸ್ಸಿನಿಂದ ಚಿಂತನೆ ಮಾಡಲ್ಪಡುವುದೋ ಅದೆಲ್ಲದರಲ್ಲಿಯೂ ಇರುವ ಶ್ರೇಷ್ಠತ್ವವು ದೈವೀ ವಿಭೂತಿಯೇ ಸರಿ. ಮೋಸಮಾಡುವವರಲ್ಲಿ ಜೂಜನ್ನೂ ತನ್ನ ಸ್ವರೂಪವೆಂದು ಹೇಳಿದ್ದಾನೆ. ಅದನ್ನೇ ಉತ್ತಮವೆಂದೂ ಮಾಡಲು ಯೋಗ್ಯವೆಂದೂ ಹೇಳಿರುವನೆಂದು ಅರ್ಥ ಮಾಡಬಾರದು. ಅತ್ಯಂತ ಕ್ರೂರವಾದ ಸಿಂಹವನ್ನೂ ಭಯಂಕರವಾದ ಮೊಸಳೆಯನ್ನೂ, ಸಹಜವಾಗಿ ನಾಶಮಾಡುವ ಅಗ್ನಿಯನ್ನೂ, ಸರ್ವಸಂಹಾರ ಕಾರಿಯಾದ ಮೃತ್ಯುವನ್ನೂ, ದೈವೀ ವಿಭೂತಿಯೆಂದು ಹೇಳಿದ ಮಾತ್ರಕ್ಕೆ ಸಿಂಹ ಅಥವಾ ಮೊಸಳೆಯೊಡನೆ ಸರಸವಾಡಬೇಕೆಂದೂ ಅಗ್ನಿಯಲ್ಲಿ ಹಾರಿ ಮೃತ್ಯು ಮುಖಕ್ಕೆ ಬೀಳಬೇಕೆಂದೂ ಅಭಿಪ್ರಾಯವಲ್ಲ. ಹೀಗೆ ಮಾಡುವುದರಿಂದ ಯಾವ ವಿಪತ್ತು ಇದೆಯೋ ಜೂಜಾಡುವುದರಲ್ಲಿಯೂ ಅದೇ ಆಪತ್ತು ಇದೆ ಎಂದು ಅರ್ಥಮಾಡಬೇಕು. (40)

ಯಾವ ಯಾವುದು ವಿಭವ ಯುಕ್ತವಾದುದೋ, ಅಥವಾ ಐಶ್ವರ್ಯ ಯುಕ್ತವಾದುದೋ, ಕಾಂತಿಯುಕ್ತ ವಾದದೋ ಶಕ್ತಿಯುಕ್ತವಾದುದೋ, ಅದೆಲ್ಲವೂ ನನ್ನ ತೇಜಸ್ಸಿನ, ಒಂದೇ ಒಂದು ಅಂಶದಿಂದ-ಕಿಡಿಯಿಂದ, ಪ್ರಕಟವಾಗಿದೆ ಎಂದು ತಿಳಿ. (41)

ಹೀಗೆ ಪರಮಾತ್ಮನು ಜಗತ್ತಿನ ಮುಖ್ಯ ಮುಖ್ಯ ವಸ್ತುಗಳಲ್ಲಿರುವ ತನ್ನ ವಿಭೂತಿಯನ್ನು-ಯೋಗಶಕ್ತಿ ರೂಪೀ ತೇಜಸ್ಸಿನ ಅಂಶವನ್ನು ವರ್ಣಿಸಿದ್ದಾನೆ.

ಪರಮೇಶ್ವರನ ವಿಭೂತಿಯು ಎಲ್ಲಿದೆ, ಎಲ್ಲಿಲ್ಲ, ಎಂಬುದನ್ನು

ತಿಳಿಯಲು ಮೂರು ಲಕ್ಷಣಗಳು ಗುರ್ತಿಸಲ್ಪಟ್ಟವೆ. ಎಲ್ಲಿ ವಿಶೇಷ ಐಶ್ವರ್ಯವು ಈಶ್ವರೀಭಾವವು ಕಾಣಬರುವುದೋ ಎಲ್ಲಿ ಕಾಂತಿ ತೇಜಸ್ಸು ತೋರಿ ಬರುವುದೋ ಎಲ್ಲಿ ವಿಶೇಷವಾದ ಪ್ರತಿಭೆಯ ಶಕ್ತಿಯು ಇರುವುದೋ ಅವೆಲ್ಲವನ್ನೂ ಪರಮಾತ್ಮನ ವಿಭೂತಿಯೆಂದೇ ತಿಳಿಯ ಬೇಕು. ಇದನ್ನು ಲಕ್ಷ್ಯದಲ್ಲಿಟ್ಟರೆ ಯಾವುದು ವಿಭೂತಿ-ಯಾವುದು ಅಲ್ಲ ಎಂಬುದರ ಅರಿವಾಗುವುದು.

ಜಡಚೇತನಗಳಲ್ಲೆಲ್ಲಾ ಈಶ್ವರನ ಪ್ರಭಾವವು ತುಂಬಿದೆ. ಜಡದಲ್ಲಿ ವಜ್ರ, ತ್ರಿಶೂಲ, ಅಮೃತ, ಚಿಂತಾಮಣಿ ಮುಂತಾದುವು. ಚೇತನಗಳಲ್ಲಿ ದೊಡ್ಡ ದೊಡ್ಡ ಜ್ಞಾನಿಗಳು ಮಹಾತ್ಮರು ಋಷಿಗಳು ಚಕ್ರವರ್ತಿ, ವ್ಯಾಘ್ರ, ಸಿಂಹ, ಮುಂತಾದುವುಗಳು. ಇವೆಲ್ಲವೂ ವಿಭೂತಿಗಳೇ. ಜಡವಾದ ಮೋಡಗಳಲ್ಲಿ ಜಲರಾಶಿಯು ಸೇರಿಕೊಂಡು ಪ್ರಚಂಡವಾದ ಮಳೆಯನ್ನು ಸುರಿಸುವ ಶಕ್ತಿ, ನದಿಗಳಲ್ಲಿ ನೀರು ವಾಯುವಿನಂತೆ ಪ್ರಚಂಡವೇಗದಿಂದ ಚಲಿಸುವ ಶಕ್ತಿ ಸಮುದ್ರದಲ್ಲಿ ಹುಟ್ಟುವ ಪ್ರಚಂಡ ಅಲೆಗಳಶಕ್ತಿ, ವೀರರಲ್ಲಿ ಯುದ್ಧ ಭೂಮಿಯಲ್ಲಿ ನಿಂತು ಪ್ರಾಣದಹಂಗು ತೊರೆದು ಯುದ್ಧದಿಂದ ಆಕರ್ಷಿತರಾಗಿ ಹೋರಾಡುವಶಕ್ತಿ, ಇವೆಲ್ಲವೂ ಪರಮಾತ್ಮನ ಯಾವುದೋ ಒಂದು ಅಂಶ ಮಾತ್ರದಿಂದ ಪ್ರಕಟವಾಗುವುವು.

ನೀನು ಹೆಚ್ಚಿಗೆ ತಿಳಿದೇನು ಪ್ರಯೋಜನ. ಈ ಜಗತ್ತನ್ನೆಲ್ಲಾ ನನ್ನ ಒಂದೇ ಒಂದು ಅಂಶದಿಂದ ಹಿಡಿದು ನಿಂತಿದ್ದೇನೆ. ಇದನ್ನು ತಿಳಿದರೆ ಸಾಕು

ಒಟ್ಟಿನಲ್ಲಿ ಒಂದೇ ವಿದ್ಯುಚ್ಛಕ್ತಿಯು ತಾನು ಪ್ರವೇಶಿಸಿದಲ್ಲೆಲ್ಲಾ—ವಿವಿಧವಾಗಿ ತೋರುವ ಯಂತ್ರ, ಬೀಸಣಿಗೆ, ಸ್ನಾನದ

ಪಾತ್ರೆ,ಅಡಿಗೆಯಒಲೆ,ಮುಂತಾದ ಪಾತ್ರೆಗಳಲ್ಲಿ ವಿವಿಧ ಕಾರ್ಯಕ್ಕೆ, ಉಪಯೋಗಿಸಲ್ಪಟ್ಟಾಗ ಬೇರೆ ಬೇರೆಯಾಗಿ ತೋರಿಬಂದರೂ ಈ ವಿವಿಧ ಪ್ರತ್ಯೇಕತೆಯೊಳಗೆ ಅಖಂಡವಾಗಿ ತಾನೊಂದೇ ಬೆಳಗ್ರು ವಂತೆ ಜಗನ್ನಿಯಾಮಕನಾದ ಜಗನ್ನಾಟಕ ಸೂತ್ರಧಾರಿಯಾದ ಜಗದೀಶ್ವರನು ತನ್ನ ತೇಜಸ್ಸನ್ನೂ, ಕಾಂತಿಯನ್ನೂ, ಪ್ರಭಾವ ವನ್ನೂ ತುಂಬಿಸಿ ಜಗತ್ತನ್ನೆಲ್ಲಾ ತನ್ನ ಒಂದೇ ಒಂದು ಅಂಶದಿಂದ ಹಿಡಿದು ನಿಂತಿದ್ದಾನೆ ಎಂಬ ಒಂದೇ ಒಂದು ವಿಷಯವನ್ನು ತಿಳಿದರೆ ಸಾಕು ಅವನ ಅನಂತ ವಿಭೂತಿಗಳನ್ನು ಬೇರೆ ಬೇರೆ ಯಾಗಿ ತಿಳಿಯುವ ಆವಶ್ಯಕತೆಯೇ ಇಲ್ಲ

ಇದುವರೆಗೂ ವರ್ಣಿಸಿದ ಎಪ್ಪತ್ತು ವಿಭೂತಿಗಳಲ್ಲಿ ಸಾರ ವಾದುದು ಸಾರತರವಾದುದ್ದು "ವೃಷ್ಣೀನಾಂ ವಾಸುದೇವೋಸ್ಮಿ" ವೃಷ್ಣಿಗಳಲ್ಲಿ ವಾಸುದೇವನು ಹೇಗೆ ಮುಖ್ಯನೋ, ಹಾಗೆಯೇ ಅ'ನು ಪುರುಷರಲ್ಲಿಯೂ ಮುಖ್ಯನು, ಉತ್ತಮನು. ಆದುದ ರಿಂದ ಅವನು ಪುರುಷೋತ್ತಮನು ಮಯೂರ ಪುಚ್ಛದ ಕಿರೀಟ, ಮಕರ ಕುಂಡಲ ವನಮಾಲೆ ಪೀತಾಂಬರಗಳಿಂದ ಅಲಂಕೃತ ವಾದ ಮೃದು ಮಂದಹಾಸದಿಂದೊಡಗೂಡಿದ ದಿವ್ಯ ಸುಂದರ ಮೂರ್ತಿಯೇ ಈ ಜಗತ್ತಿನಲ್ಲೆಲ್ಲಾ ತುಂಬಿ ಪುರುಷೋತ್ತಮ ನಾಗಿ ಪರಮ ಪುರುಷನಾಗಿ ಇದೆಲ್ಲವನ್ನೂ ತನ್ನ ಒಂದೇ ಒಂದು ಅಂಶದಿಂದ ಹಿಡಿದು ನಿಂತು ನಲಿಯುತ್ತಿದ್ದಾನೆ ಎಂದು ತಿಳಿದರೆ ಸಾಕಲ್ಲವೇ ?



